# ನಮನ

## ಶ್ರೀ ಸಿ. ನರಸಿಂಹಮೂರ್ತಿ
## ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿ
## ಸ್ಮರಣ ಗ್ರಂಥ

*ಸಂಪಾದಕಿ*

**ಡಾ॥ ಚಿ. ನ. ಮಂಗಳಾ**

ನಮನ	ಶ್ರೀ ಸಿ. ನರಸಿಂಹಮೂರ್ತಿ ಮತ್ತು ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿ ಸ್ಮರಣ ಗ್ರಂಥ

ಸಂಪಾದಕಿ : ಡಾ|| ಚಿ. ನ. ಮಂಗಳಾ
"ಮಾಹೇಶ್ವರೀ ಪ್ರಸಾದ"
ನಂ. 345, ನಾಲ್ಕನೇ ಮುಖ್ಯರಸ್ತೆ,
ಸದಾಶಿವನಗರ, ಬೆಂಗಳೂರು – 560 080
ದೂರವಾಣಿ : 3345671

ಪುಟಗಳು : 164

ಬೆಲೆ : ರೂ. ೧೫೦

**NAMANA** - *Sri C. Narasimha Moorthy and Smt. Rajeshwari Narasimha Moorthy Memorial Volume.*

First Edition : 1979 (Smruthi)
Second Edition : 1996 (Namana)





Pages : 164

Price : Rs. 150

Editor : **Dr. C. N. MANGALA**
"Maheshwari Prasada"
No. 345, 4th Main, Sadashiva Nagar,
Bangalore - 560 080 Phone : 3345671

Printed at : **SPAN PRINT**
Basavanagudi, Bangalore - 560 004
Ph. : 6628880

| ವಿಷಯಾನುಕ್ರಮಣಿಕೆ | | ಪುಟ |
|---|---|---|
| ಅರ್ಪಣೆ | | 5 |
| ಪ್ರಾರ್ಥನಾ ಗೀತೆಗಳು | ವಿದ್ಯುಲ್ಲತಾ ಎನ್. ನಗರ್ | 7 |
| ನಿವೇದನೆ | ಡಾ॥ ಚಿ. ನ. ಮಂಗಳಾ (ಎರಡನೇ ಆವೃತ್ತಿಗೆ) | 9 |
| ಮುನ್ನುಡಿ | ಶ್ರೀ ನಿಟ್ಟೂರು ಶ್ರೀನಿವಾಸ ರಾವ್ | 11 |
| ಹರಕೆ | ಪೂಜ್ಯ ಶ್ರೀ ರಾಘವೇಂದ್ರ ಸ್ವಾಮೀಜಿ | 13 |
| ನಿವೇದನೆ | ಚಿ. ನ. ಮಂಗಳಾ (ಮೊದಲನೇ ಆವೃತ್ತಿಗೆ) | 14 |

## ಬದುಕು

## "SIM"



## ಬರಹ

# ಅರ್ಪಣೆ



ಶ್ರೀ ಎಂ. ವೆಂಕಟಕೃಷ್ಣಯ್ಯನವರು

(1844 - 1933)

ವೃದ್ಧಪಿತಾಮಹ ಶ್ರೀ ಎಂ. ವೆಂಕಟಕೃಷ್ಣಯ್ಯನವರು

ಮೈಸೂರಿನಲ್ಲಿ ಸ್ಥಾಪಿಸಿದ

ಅನಾಥಾಲಯದಲ್ಲಿ

ತಾತಯ್ಯನವರ ಮಾರ್ಗದರ್ಶನದಲ್ಲಿ ಬೆಳೆದು, ಬೆಳಗಿದ

ನಮ್ಮ ತಂದೆ

ಶ್ರೀ ಸಿ. ನರಸಿಂಹಮೂರ್ತಿ ಅವರ

ಸ್ಮರಣ ಗ್ರಂಥ

# ನಮನ

ಅನಾಥಾಲಯದ ಶತಮಾನೋತ್ಸವದ ಸವಿನೆನಪಿಗಾಗಿ

ಪ್ರೀತಿಯಿಂದ ಅರ್ಪಿತ

29-12-1996

# ಪ್ರಾರ್ಥನೆ

## ಮಹಾಗಣಪತಿಂ ಸದಾ ಭಜೇಹಂ

ರಾಗ : ಹಂಸಧ್ವನಿ ತಾಳ : ಆದಿ

ಮಹಾಗಣಪತಿಂ ಸದಾ ಭಜೇಹಂ (ಮಹಾ)

ವಿಘ್ನವಿನಾಶಕಂ ಮಂಗಳಕಾರಕಂ
ಬುದ್ಧಿಪ್ರದಾಯಕಂ ಸಿದ್ಧಿವಿನಾಯಕಂ (ಮಹಾ)

ನಾದಮಧ್ಯ ಪ್ರತಿಷ್ಠಿತಂ ದೇವದೇವಂ
ಸಾಮ ಘೋಷಪ್ರಿಯಂ ವಿಶ್ವವಂದ್ಯಂ
ಗದ್ಯಪದ್ಯಸುಧಾರ್ಣವಂ
ವೀಣಾಗಾನವಿಲೋಲಂ ಶಿವಶಕ್ತಿಕುಮಾರಂ (ಮಹಾ)

## ವಾಣಿ ವೀಣಾ ಪುಸ್ತಕ ಧಾರಿಣಿ

ರಾಗ : ನಾಟ ತಾಳ : ಏಕ

ವಾಣಿ ವೀಣಾ ಪುಸ್ತಕ ಧಾರಿಣಿ
ಪ್ರಸೀದ ಪ್ರಸೀದ (ವಾಣಿ)

ವಿದ್ಯಾದಾಯಿನಿ ಕವಿತಾದಾಯಿನಿ
ಪ್ರತಿಭಾದಾಯಿನಿ ಜ್ಞಾನದಾಯಿನಿ
ಭಾವರಾಗಲಯ ಗಾನವಿಲೋಲಿನಿ
ಹೃದಯನಿವಾಸಿನಿ ಪ್ರಸೀದ ಪ್ರಸೀದ (ವಾಣಿ)

ವರ್ಣಪದ ವಾಕ್ಯಾರ್ಥ ಸ್ವರೂಪಿಣಿ
ಅನಾದಿನಿಧನೇ ಅನಂತರೂಪಿಣಿ
ಮಂಜುಳಭಾಷಿಣಿ ಶಿವಶಕ್ತಿರೂಪಿಣಿ
ಭಗವತಿ ಭಾರತಿ ಪ್ರಸೀದ ಪ್ರಸೀದ (ವಾಣಿ)

**ವಿದ್ಯುಲ್ಲತಾ ಎನ್. ನಗರ್**

## ಶ್ರೀ ಲಕ್ಷ್ಮಿನೃಸಿಂಹ ಸ್ತುತಿ

ರಾಗ : ಲಲಿತ                                        ತಾಳ : ಆದಿ

ಶ್ರೀ ಲಕ್ಷ್ಮೀ ನೃಸಿಂಹ ಪರಿಪಾಲಯ
ಪ್ರಹ್ಲಾದ ವರದ ಕೃಪಯಾ ದೇಹಿ
ಅಭಯಂ ದೇಹಿ ॥

ವೇದತ್ರಯ ಪ್ರಪೂಜ್ಯ ದೈತ್ಯ ದಾನವ ಭಂಜನ
ಮಾಧವ ಕೇಶವ ಅಚ್ಯುತ ಅನಂತ ಶ್ರೀಧರ
ಶ್ರೀಕರ ಸದಯ ಪಾಹಿ ॥                    (ಶ್ರೀ ಲಕ್ಷ್ಮೀ ...)

ಮಹಾದಂಷ್ಟ್ರಾಯುಧ ವಜ್ರನಖನೃಕೇಸರಿ
ಸರ್ವಸಿದ್ಧಿಪ್ರದಾಯಕ ಸರ್ವಾರಿಷ್ಟವಿನಾಶಕ
ಮುಕುಂದ ಮುರಾರಿ ಮೃಗೇಂದ್ರ ಮಹಾತ್ಮ
ಶಿವಶಕ್ತಿ ಪ್ರಿಯ ಮಿತ್ರ ಭವ ಮಮ ವರದ ॥   (ಶ್ರೀ ಲಕ್ಷ್ಮೀ ...)

**ವಿದ್ಯುಲ್ಲತಾ ಎನ್. ನಗರ್**
8 ಮೇ 1981

## ಮಂಗಳಂ

ಪಾವನ ಪುರುಷಾ ನರಸಿಂಹ
ಶರಣರ ಕಾವಾ ನರಸಿಂಹ
ಮಂಗಳ ಆರತಿ ಎತ್ತುವೆ ಹರಿಯೆ
ಮಂಗಳಕರ ಶ್ರೀ ನರಸಿಂಹ
ಮುತ್ತಿನ ಆರತಿ ತೋರುವೆ ದೊರೆಯೆ
ಮುಕುತಿಯ ಕರುಣಿಸು ನರಸಿಂಹ
ಜೈ ಮುಕುತಿಯ ಕರುಣಿಸು ನರಸಿಂಹ ॥

**ರಾಜೇಶ್ವರಿ ನರಸಿಂಹಮೂರ್ತಿ**

# ನಿವೇದನೆ (ಎರಡನೆ ಆವೃತ್ತಿಗೆ)

ನಮ್ಮ ಪೂಜ್ಯ ತಂದೆ ಶ್ರೀ ಸಿ. ನರಸಿಂಹಮೂರ್ತಿ ಅವರ ನೆನಪಿಗಾಗಿ ಸ್ಥಾಪಿತವಾದ 'ಕಲಾಭಾರತಿ'ಯ ದಶಮಾನೋತ್ಸವ ಸಂದರ್ಭದಲ್ಲಿ (1979) ಈ ಸ್ಮರಣ ಗ್ರಂಥ ಪ್ರಥಮಬಾರಿಗೆ ಪ್ರಕಟವಾಯಿತು. 'ಕಲಾಭಾರತಿ' ತನ್ನ ಬೆಳ್ಳಿಹಬ್ಬವನ್ನು ಆಚರಿಸಿ ತನ್ನ ಹುಟ್ಟನ್ನು ಸಾರ್ಥಕಪಡಿಸಿಕೊಂಡು ಭಾರತೀಯ ಸಾಹಿತ್ಯ, ಸಂಸ್ಕೃತಿ ಕಲಾಪರಂಪರೆಯಲ್ಲಿ ಲೀನವಾಗಿ ಧನ್ಯಳಾದಳು.

1979ರಲ್ಲಿ 'ಸ್ಮೃತಿ' ಎಂಬ ಹೆಸರಿನಲ್ಲಿ ಅಚ್ಚಾದ ಗ್ರಂಥ ಈಗ 'ನಮನ' ಎಂಬ ಹೆಸರಿನಲ್ಲಿ ಮರು ಮುದ್ರಣವಾಗಿದೆ. ನಮ್ಮ ತಂದೆ–ತಾಯಿಯರನ್ನು ಕುರಿತಾದ ಲೇಖನಗಳು ಮಾತ್ರ ಇಲ್ಲಿವೆ. ಉಳಿದ ಲೇಖನಗಳು ಇಲ್ಲಿಲ್ಲ. ಅಲ್ಲದೆ ಕೆಲವು ಹೊಸ ಲೇಖನಗಳೂ, ನಮ್ಮ ತಂದೆ–ತಾಯಿಯರ ಬಿಡಿ ಲೇಖನಗಳಲ್ಲಿ ಕೆಲವೂ ಇಲ್ಲಿ ಸೇರಿವೆ. 'ಸ್ಮೃತಿ'ಗೆ ಆದರದಿಂದ ಲೇಖನಗಳನ್ನು ಬರೆದುಕೊಟ್ಟ ಅನೇಕ ಮಹನೀಯರು, ಮಹಿಳೆಯರು ಈಗ ಕೀರ್ತಿಶೇಷರಾಗಿದ್ದಾರೆ. ಮಲ್ಲಾಡಿಹಳ್ಳಿಯ ಸದ್ಗುರು ಶ್ರೀ ರಾಘವೇಂದ್ರಸ್ವಾಮಿಗಳು, ವಿ. ಕೃ. ಗೋಕಾಕರು, ಶಾರದಾ ಗೋಕಾಕರು, ನಮ್ಮ ತಂದೆಯ ಅಕ್ಕ ಲಲಿತಮ್ಮ, ತಂಗಿ ನಂಜಮ್ಮ, ವಿ. ಸೀತಾರಾಮಯ್ಯ, ಎಂ. ವಿ. ಸೀತಾರಾಮಯ್ಯ, ರುಮಾಲೆ ಚೆನ್ನಬಸವಯ್ಯ, ಅಗರಂ ರಂಗಯ್ಯ, ನಿರಂಜನ, ಎಲ್. ವೆಂಕಟರಮಣಯ್ಯ, ಮಾಸ್ತಿ, ವಿ. ಎಲ್. ಡಿಸೌಜಾ, ನಾ. ಕಸ್ತೂರಿ, ಆರ್. ಕೆ. ಶ್ರೀನಿವಾಸನ್, ಎಂ. ಎನ್. ಪಾರ್ಥಸಾರಥಿ, ಆರಯ್ಯ (ಎನ್. ಎಸ್. ರಾಮಚಂದ್ರಯ್ಯ), ಡಾ॥ ಎಸ್. ಶೇಷಗಿರಿ ರಾವ್, ನನ್ನ ತಂಗಿ ವಾಣಿ ಮಾಧವ್ ಇವರೆಲ್ಲ ಬದುಕಿನಿಂದ ಭೌತಿಕವಾಗಿ ಕಣ್ಮರೆಯಾದರೂ ಅವರ ಪ್ರೀತಿ, ಅಭಿಮಾನ ಬರಹದಲ್ಲಿ ಮೂಡಿ ಚಿರಸ್ಥಾಯಿಯಾಗಿದೆ.

1996 ನಮ್ಮ ತಂದೆಯವರ 85ನೇ ಹುಟ್ಟುಹಬ್ಬದ, ನಮ್ಮ ತಾಯಿಯವರ 80ನೇ ಹುಟ್ಟುಹಬ್ಬದ ವರುಷ. ಅರವತ್ತರ ಹೊಸ್ತಿಲಿನಲ್ಲಿರುವ ನಾನು ದಯಾಮಯನಾದ ಭಗವಂತನಿಗೆ ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸಿ ಹಿರಿಯರಿಗೆಲ್ಲಾ ನಮಿಸಿ ಈ ಕೃತಿಯನ್ನು ನಮ್ಮ ತಂದೆ ತಮ್ಮ ವಿದ್ಯಾಭ್ಯಾಸದ ಅಮೂಲ್ಯ ವರುಷಗಳನ್ನು ಕಳೆದ, ಈಗ ಶತಮಾನೋತ್ಸವದ ಸಂಭ್ರಮದಲ್ಲಿರುವ, ತಾತಯ್ಯನವರು ಸ್ಥಾಪಿಸಿದ 'ಅನಾಥಾಲಯ'ಕ್ಕೆ ನನ್ನ ಪ್ರೀತಿಯ ಕಾಣಿಕೆಯಾಗಿ ಅರ್ಪಿಸುತ್ತಿದ್ದೇನೆ.

ಅತ್ಯಂತ ಆದರದಿಂದ ಮುನ್ನುಡಿಯನ್ನು ಬರೆದುಕೊಟ್ಟ ಹಿರಿಯರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೂ, ಅಭಿಮಾನದಿಂದ ಲೇಖನವನ್ನು ಬರೆದುಕೊಟ್ಟ ಪ್ರೊ॥ ಜಿ. ವೆಂಕಟಸುಬ್ಬಯ್ಯನವರಿಗೂ ಕೃತಜ್ಞಳಾಗಿದ್ದೇನೆ.

ಈ ಕೃತಿಯ ಕರಡಚ್ಚನ್ನು ತಿದ್ದುವುದರಲ್ಲಿ ನನಗೆ ತುಂಬಾ ನೆರವಾದ ಶ್ರೀ ಅಶೋಕ ಶೆಟ್ಟಿ, ಪ್ರೆಸ್ಸಿಗೆ ಒಡಾಡಿದ ಶ್ರೀ ಎನ್. ಶಿವರಾಜ್ ಹಾಗೂ ಶ್ರೀ ಮರಿಯಣ್ಣ ಇವರಿಗೆ ನಾನು ಆಭಾರಿ.

ಮೈಸೂರು ಅನಾಥಾಲಯದಲ್ಲಿದ್ದು ವಿದ್ಯಾರ್ಜನೆ ಮಾಡಿದ, ನ್ಯಾಷನಲ್ ಕಾಲೇಜಿನಲ್ಲಿ ಆಂಗ್ಲ ಭಾಷಾ ಪ್ರಾಧ್ಯಾಪಕರಾಗಿದ್ದ ಡಾ॥ ಜಿ. ರಾಮಕೃಷ್ಣ ಅವರು ಮಾರ್ಚ್ 7, 1992ರಲ್ಲಿ ನನಗೊಂದು ಪತ್ರ ಬರೆದರು. "ಅಂದು ಕಲ್ಯಾಣಮ್ಮನವರ ಶತಾಬ್ದಿಯ ಸಂದರ್ಭದಲ್ಲಿ ನೀವು ಮಾಡಿದ ಭಾಷಣದ ನಂತರ ನಿಮ್ಮ ಅಜ್ಜಿ, ತಾಯಿ ಮತ್ತು ತಂದೆಯವರ ಬಗ್ಗೆ ಎಷ್ಟು ಆದರ ತೋರಿದರೂ ಕಡಿಮೆಯೇ ಎನಿಸುತ್ತದೆ. ಇದೇ ನಮ್ಮ ದೇಶದ ಸೊಗಸು. ಒಂದೆಡೆ ಸಂಪ್ರದಾಯದ ಕಪಿಮುಷ್ಠಿ. ಇನ್ನೊಂದೆಡೆ ಅಷ್ಟೇ ಪ್ರಬಲವಾದ ವೈಚಾರಿಕತೆ. ಎರಡರಲ್ಲಿ ಯಾವುದನ್ನು ಆಯ್ಕೆ ಮಾಡಿಕೊಂಡರೂ ನಿಷ್ಠೆಯಿಂದಿರುತ್ತಿದ್ದ, ಇರುವ ಜನ ನಮಗೆ ಆದರಣೀಯರು." ಸೋದರ ಡಾ॥ ಜಿ. ರಾಮಕೃಷ್ಣ ಅವರ ವಸ್ತುನಿಷ್ಠ ಮಾತು ಅಕ್ಷರಶಃ ನಿಜ.

ಎಂದಿನಂತೆ 'ಸ್ಕ್ಯಾನ್‌ಪ್ರಿಂಟ್'ನ ಸೋದರ ಶ್ರೀ ಕೆ. ನಾರಾಯಣ ಅವರು ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿದ್ದಾರೆ. ಅವರಿಗೂ ನನ್ನ ಕೃತಜ್ಞತೆಗಳು.

ಅನಾಥಾಲಯದ ಶತಮಾನೋತ್ಸವ ಸಮಾರಂಭದಲ್ಲಿ ಈ ಕೃತಿಯನ್ನು ಬಿಡುಗಡೆ ಮಾಡಲು ಸಂತೋಷದಿಂದ ಒಪ್ಪಿದ "ಶತಮಾನೋತ್ಸವ ಸಮಿತಿ"ಗೆ ನನ್ನ ಆದರದ ವಂದನೆಗಳು.

29 ಡಿಸೆಂಬರ್ 1996 **ಚಿ. ನ. ಮಂಗಳಾ**
ಬೆಂಗಳೂರು

# ಮುನ್ನುಡಿ

'ಕಲಾಭಾರತಿ' ಸಂಸ್ಥೆಗೆ ಹತ್ತು ವರ್ಷ ತುಂಬಿದ ಸಂದರ್ಭದಲ್ಲಿ ಈಗ ಹದಿನೇಳು ವರ್ಷಗಳ ಹಿಂದೆ ಪ್ರಕಟನಗೊಂಡುದು, ಈ 'ಸ್ಮೃತಿ' ಎಂಬ ಗ್ರಂಥ. 'ಕಲಾಭಾರತಿ'ಯು ಈ ಗ್ರಂಥದ ಸಂಪಾದಕರಾದ ಚಿ॥ ಶ್ರೀ ॥ ಚಿ. ನ. ಮಂಗಳಾ ಅವರ ಪೂಜ್ಯ ತಂದೆ ಶ್ರೀ ಸಿ. ನರಸಿಂಹಮೂರ್ತಿಯವರು ಅಕಸ್ಮಾತ್ತಾಗಿ ನಿಧನರಾದಾಗ ಅವರ ನೆನಪಿಗಾಗಿ ಅವರು ಪ್ರೀತಿಯಿಂದ ಪೋಷಿಸುತ್ತಿದ್ದ ಧ್ಯೇಯಗಳನ್ನು ಕಾರ್ಯಾಚರಣೆಯಲ್ಲಿ ತರಲು ಯುವಜನಾಂಗದಲ್ಲಿ ಸಾಹಿತ್ಯ-ಕಲೆ-ಸಂಸ್ಕೃತಿಗಳ ಬಗೆಗೆ ಆಸಕ್ತಿ ಮೂಡಿಸಲು ಸ್ಥಾಪಿತವಾದುದು. ಈ ಪುಸ್ತಕದ ಪುನರಾವೃತ್ತಿಯನ್ನು ಮೈಸೂರಿನಲ್ಲಿರುವ 'ಅನಾಥಾಲಯ'ದ ಶತಮಾನೋತ್ಸವದ ಸಂದರ್ಭದಲ್ಲಿ ಹೊರತರಲಾಗುತ್ತಿರುವುದರಲ್ಲಿ ವಿಶೇಷವಾದ ಔಚಿತ್ಯವಿದೆ, ಈ ಮಧ್ಯೆ 'ಕಲಾಭಾರತಿ'ಯು ತನ್ನ ಉದ್ದೇಶಗಳನ್ನು ಬಹು ಯಶಸ್ವಿಯಾಗಿ ನಿರ್ವಹಿಸಿರುವುದು ತುಂಬ ಸಂತೋಷದ ವಿಷಯ.

ಮೈಸೂರಿನ ವೃದ್ಧಪಿತಾಮಹರು ಅಥವಾ ತಾತಯ್ಯನವರೆಂದೇ ಸಕಲರ ಪ್ರೀತಿ ಗೌರವಗಳಿಗೂ ಪಾತ್ರರಾಗಿದ್ದ ಪ್ರಾತಃಸ್ಮರಣೀಯರಾದ ಎಂ. ವೆಂಕಟಕೃಷ್ಣಯ್ಯನವರು ಬಹು ದೊಡ್ಡ ವ್ಯಕ್ತಿ. ಈ ಪ್ರಾಂತದ ಜನಜೀವನದ ನಾನಾ ಕ್ಷೇತ್ರಗಳಲ್ಲಿ ನವಚೈತನ್ಯ ತುಂಬಿದ ಮಹನೀಯರು. ಅವರಿಗೆ ವಿದ್ಯಾರ್ಥಿಗಳಲ್ಲಿ ವಿಶೇಷ ಮಮತೆಯಿತ್ತು. ಬಡತನವೇ ಮುಂತಾದ ಕಾರಣಗಳಿಂದ ವಿದ್ಯಾರ್ಜನೆಗೆ ಅಡೆತಡೆಗಳನ್ನು ಅನುಭವಿಸುತ್ತಿರುವ ವಿದ್ಯಾರ್ಥಿಗಳಿಗಾಗಿ ಅನಾಥಾಲಯವನ್ನು ಸ್ಥಾಪಿಸಿ, ಒಳ್ಳೆಯ ತಳಹದಿಯನ್ನು ಹಾಕಿ ಜನರ ಬೆಂಬಲದಿಂದ ನಡೆಸಿಕೊಂಡು ಬಂದರು. ಆ ಸಂಸ್ಥೆಯ ಸಾರ್ಥಕ್ಯಕ್ಕೆ ಅದನ್ನು ಸೇರಿ ವಿದ್ಯಾಭ್ಯಾಸವನ್ನು ಮುಂದುವರಿಸಿದ ಶ್ರೀ ನರಸಿಂಹಮೂರ್ತಿ ಅವರೇ ಜ್ವಲಂತ ಸಾಕ್ಷಿ. ಅವರಂತೆಯೇ ಇನ್ನೂ ಅನೇಕರನ್ನು ಹೆಸರಿಸಬಹುದು.

ನರಸಿಂಹಮೂರ್ತಿಯವರಿಗೆ ತಾತಯ್ಯನವರ ಸಂಕರ್ಪವೊದಗಿದುದು ಕೇವಲ ಅನಾಥಾಲಯದ ಕಾರಣದಿಂದಲೇ ಅಲ್ಲ. ಅವರು ಅನಾಥಾಲಯವನ್ನು ಸೇರುವುದಕ್ಕೆ ಮುಂಚೆಯೇ ತಾತಯ್ಯನವರ ದೃಷ್ಟಿ ಇವರ ಮೇಲೆ ಬಿದ್ದು ಇವರ ಗುಣಗಳಿಂದ ಆಕರ್ಷಿತರಾಗಿ ಇವರನ್ನು ತಮ್ಮ ಸಮೀಪವರ್ತಿಗಳನ್ನಾಗಿ ಮಾಡಿಕೊಂಡು, ಅವರ ಬರವಣಿಗೆ ಕೆಲಸ – ಮುಖ್ಯವಾಗಿ ವೃತ್ತಪತ್ರಿಕೆಗೆ ಸಂಬಂಧಪಟ್ಟದ್ದು, ಇದಕ್ಕೆ ಅವರ ನೆರವನ್ನು ಪಡೆದರು. ತಾತಯ್ಯನವರ ಕಡೆಯ ದಿನಗಳವರೆಗೂ ನರಸಿಂಹಮೂರ್ತಿಗಳು ಅವರಿಗೆ ಅಚ್ಚುಮೆಚ್ಚಾಗಿದ್ದರು.

ನರಸಿಂಹಮೂರ್ತಿಗಳು ಅವರ ವಿದ್ಯಾಭ್ಯಾಸದ ಎಲ್ಲ ಹಂತಗಳಲ್ಲೂ ಶ್ರೇಷ್ಠತಮರಾಗಿದ್ದರು. ಅವರ ಆಸಕ್ತಿ ಕೇವಲ ಪಾಠಪ್ರವಚನಕ್ಕೆ ಸೀಮಿತವಾಗಿರಲಿಲ್ಲ. ವಿಶ್ವವಿದ್ಯಾನಿಲಯದ ಯೂನಿಯನ್‌ನಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅತ್ಯಂತ

ಪ್ರಭಾವಶಾಲಿ ವಾಗ್ಮಿಗಳೆಂಬ ಕೀರ್ತಿ ಗಳಿಸಿದರು. ಅತ್ಯುನ್ನತ ಪರಂಪರೆಯನ್ನು ಗಳಿಸಿಕೊಂಡ ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಗಳಿಸಿ ಕ್ರಮೇಣ ಅನೇಕ ಜವಾಬ್ದಾರಿ ಸ್ಥಾನಗಳಲ್ಲಿದ್ದು ತಮ್ಮ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಿ ಆಡಳಿತ ವರ್ಗದ ಹಾಗೂ ಪ್ರಜೆಗಳ ಗೌರವಾದರಗಳನ್ನು ಸಂಪಾದಿಸಿದರು. ಇವೆಲ್ಲದರ ಮಧ್ಯೆ ಅವರಲ್ಲಿ ಸದಾ ಇದ್ದ ಸಾಂಸ್ಕೃತಿಕ ಆಸಕ್ತಿಯನ್ನು ಮುಂದುವರಿಸಿಕೊಂಡೇ ಬಂದರು. ಅವರ ಸಂಪರ್ಕ ಪಡೆದವರೆಲ್ಲಾ ಅವರ ಸೌಜನ್ಯ ಶೀಲತೆ, ಅನುಕಂಪದ ಹೃದಯ, ಸೇವಾತತ್ಪರತೆ, ಅನುಭವ ಮತ್ತು ವಿಚಾರಪರತೆಯಿಂದ ಮಾಗಿದ ಮಾನವೀಯತೆ, ಇವುಗಳಿಂದ ಆಕರ್ಷಿತರಾಗುತ್ತಿದ್ದರು. ಅವರ ಜೀವನ ಮೌಲ್ಯಗಳೂ ಅವರ ನುರಿತ ಅಭಿಪ್ರಾಯಗಳೂ ಈ ಪುಸ್ತಕದಲ್ಲಿ ಪ್ರಕಟವಾಗಿರುವ ಅವರ ಕೆಲವು ಲೇಖನಗಳಿಂದ ವೇದ್ಯವಾಗುತ್ತವೆ. ಅವರ ಕೌಟುಂಬಿಕ ಜೀವನವೂ ಆದರ್ಶಪ್ರಾಯವಾಗಿತ್ತು. ಕುಟುಂಬ ಜೀವನದ ಒಳಗೂ ಹೊರಗೂ ಕುಟುಂಬದವರೆಲ್ಲ ಎಷ್ಟು ಸುಸಂಸ್ಕೃತರೆಂಬುದು ವೇದ್ಯವಾಗುತ್ತಿತ್ತು. ಇಂದು ದೃಷ್ಟಾಂತವಾಗಿ ಅವರ ಮಗಳು ಚಿ. ನ. ಮಂಗಳಾ, ಅವರ ಮೊಮ್ಮಗಳು ವಿದ್ಯುಲ್ಲತಾ ಇವರುಗಳನ್ನು ಹೆಸರಿಸಬಹುದು.

ಈ ಪುಸ್ತಕವನ್ನು ಹೊರತಂದ ಅವರ ಮಗಳು ಚಿ॥ ಚಿ. ನ. ಮಂಗಳಾ ಅವರು ದಾಖಲಿಸಿದಂತೆ ಅವರ ತಾಯಿಯವರು ನರಸಿಂಹಮೂರ್ತಿಯವರನ್ನು ಬಹು ದೊಡ್ಡ ವ್ಯಕ್ತಿಯೆಂದು ಹೇಳಿದ್ದು ಅಕ್ಷರಶಃ ನಿಜ. ಇವರನ್ನು ನಾನಾ ಸನ್ನಿವೇಶಗಳಲ್ಲಿ ಬಲ್ಲ ಹಲವಾರು ಮಾನ್ಯರು ಅವರನ್ನು ಕುರಿತು ಬರೆದಿರುವ ಲೇಖನಗಳು ಈ ಘನವ್ಯಕ್ತಿತ್ವವನ್ನು ಅರಿತುಕೊಳ್ಳಲು ಅನುವಾಗಿವೆ.

ಇಂಥ ಅಪೂರ್ವ ಸತ್ಪುರುಷರನ್ನು ನೆನೆಸಿಕೊಳ್ಳಲು ನನಗೆ ಅವಕಾಶ ಒದಗಿಸಿದ ಚಿ॥ ಚಿ. ನ. ಮಂಗಳಾ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಅವರಿಗೂ ದಿವಂಗತ ನರಸಿಂಹಮೂರ್ತಿಗಳ ಕುಟುಂಬ ವರ್ಗದವರಿಗೂ ಶ್ರೇಯಸ್ಸನ್ನು ಕೋರುತ್ತೇನೆ. ಹಾಗೆಯೇ ಮೈಸೂರಿನ ಅನಾಥಾಲಯವೂ 'ಚಿರಮಭಿವರ್ಧತಾಮ್' ಎಂದು ಹಾರೈಸುತ್ತೇನೆ.

ಬೆಂಗಳೂರು
29.12.1996

ನಿಟ್ಟೂರು ಶ್ರೀನಿವಾಸ ರಾವ್

# ಹರಕೆ
(ಮೊದಲನೆಯ ಆವೃತ್ತಿಗೆ)

## ಪೂಜ್ಯ ಶ್ರೀ ರಾಘವೇಂದ್ರ ಸ್ವಾಮೀಜಿ
**ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ**

ನಿಮ್ಮ 'ಕಲಾಭಾರತಿ' ಸಾಂಸ್ಕೃತಿಕ ಸಂಸ್ಥೆಯ ಹತ್ತನೆಯ ಹುಟ್ಟುಹಬ್ಬದ ಮಂಗಲಮಯ ಸನ್ನಿವೇಶದಲ್ಲಿ ನಿಮ್ಮ ಪೂಜ್ಯ ತಂದೆಯವರಾದ ದಿ॥ ಶ್ರೀ ನರಸಿಂಹಮೂರ್ತಿಯವರ ಸವಿನೆನಪಿಗಾಗಿ ಒಂದು ಸಂಸ್ಕರಣ ಗ್ರಂಥವನ್ನು ಪ್ರಕಟಿಸಬೇಕೆಂದಿರುವ ನಿಮ್ಮ ಪಿತೃವಾತ್ಸಲ್ಯವು ನಿಜವಾಗಿಯೂ ಶ್ಲಾಘನೀಯ ಮತ್ತು ಅನುಕರಣೀಯ. ನೀವು ಯೋಜಿಸಿಕೊಂಡಿರುವ ಸಾಹಿತ್ಯ ಸೇವೆಯ ಜ್ಞಾನದಾಸೋಹವು ನಿಜವಾಗಿಯೂ ನಿಮ್ಮ ಸ್ವರ್ಗಸ್ಥ ತಂದೆಯವರ ಪವಿತ್ರಾತ್ಮಕ್ಕೆ ತೃಪ್ತಿಯನ್ನುಂಟಾಗಿಸುವುದೆಂದು ನನ್ನ ಪೂರ್ಣ ನಂಬುಗೆ. ಇಂತಹ ನಿಮ್ಮ ವಿಚಾರಶೀಲ ಕಾರ್ಯಯೋಜನೆಗೆ ನನ್ನ ಆತ್ಮೀಯ ಸ್ವಾಗತ. ಶ್ರೀ ಗುರುವು ನೀವು ಹಮ್ಮಿಕೊಂಡಿರುವ ಕಾರ್ಯವನ್ನು ನಿರ್ವಿಘ್ನ ವಾಗಿಯೂ, ಯಶಸ್ವಿಯಾಗಿಯೂ ನೆರವೇರಿಸಲೆಂದು ಹಾರೈಸುತ್ತೇನೆ.

# ನಿವೇದನೆ (ಪ್ರಥಮ ಆವೃತ್ತಿಗೆ)

ಇಪ್ಪತ್ತು ವರುಷಗಳ ಹಿಂದೆ – 1959ರ ಒಂದು ಸಂಜೆ. ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ನಾನು ಎಂ. ಎ. ತರಗತಿಯಲ್ಲಿ ಓದುತ್ತಿದ್ದೆ. ಕಾಲೇಜಿಂದ ಮನೆಗೆ ಬಂದಾಗ ನನ್ನ ತಾಯಿ ಮನೆಯಲ್ಲಿ ಒಬ್ಬರೇ ಇದ್ದರು. ಬೆಳಿಗ್ಗೆ ಆರೋಗ್ಯವಾಗೇ ಇದ್ದವರು ನಾನು ಬರುವ ವೇಳೆಗೆ ಅಸ್ವಸ್ಥರಾಗಿದ್ದರು. ನಾನು ಬಂದ ಕೂಡಲೆ ನನ್ನನ್ನು ಕರೆದು "ನನಗೆ ಮೈ ಅಷ್ಟು ಸರಿಯಿಲ್ಲ. ನಿನಗೆ ಒಂದು ಮಾತು ಹೇಳಬೇಕು. ಬಹಳ ಹಿಂದೆಯೇ ಹೇಳಬೇಕೆಂದಿದ್ದೆ, ಇವತ್ತು ಹೇಳುತ್ತೇನೆ. ನಿಮ್ಮ ತಂದೆ ತುಂಬ ದೊಡ್ಡ ವ್ಯಕ್ತಿ. ಮಕ್ಕಳು ನಿಮಗೆ ತಿಳಿದಿರಬೇಕು" ಎಂದು ಹೇಳಿ ನನ್ನ ಕೈಗೆ ಕಾಗದ ಪತ್ರಗಳ ಒಂದು ಕಟ್ಟು ಕೊಟ್ಟರು. ನಾನು ಅದನ್ನು ಹಾಗೇ ಇಟ್ಟು ಮೊದಲು ತಾಯಿಗೆ ಔಷಧಿ ತರಲು ಓಡಿದೆ. ನಮ್ಮ ತಂದೆ ದೊಡ್ಡ ವ್ಯಕ್ತಿ – ಹಿರಿಯ ಚೇತನ – ಅವರದು ದೇವರಂಥ ವ್ಯಕ್ತಿತ್ವ. ಅಷ್ಟೇ ಹಿರಿಯ ವ್ಯಕ್ತಿತ್ವ ನಮ್ಮ ತಾಯಿಯದು. ಇವರ ಹಿರಿಮೆಯನ್ನು ನಾವು ಮಕ್ಕಳು ಆದಷ್ಟು ಅರಿಯಲು ಪ್ರಯತ್ನಿಸಿದ್ದೇವೆ. ಇಂಥ ತಂದೆ ತಾಯಿಯರ ಮಕ್ಕಳು ನಾವು ಎಂಬ ಹೆಮ್ಮೆ, ತೃಪ್ತಿ ನಮಗೆ.

1968ರಲ್ಲಿ ನಮ್ಮ ತಂದೆ ಸ್ವಾಮಿಯಲ್ಲಿ ಸೇರಿ ಹೋದಾಗ ಅವರ ನೆನಪಿಗಾಗಿ, ಅವರು ಪ್ರೀತಿಯಿಂದ ಪೋಷಿಸುತ್ತಿದ್ದ ಧ್ಯೇಯಗಳನ್ನು ಕಾರ್ಯಾಚರಣೆಯಲ್ಲಿ ತರಲು, ಯುವ ಜನಾಂಗದಲ್ಲಿ ಸಾಹಿತ್ಯ – ಕಲೆ – ಸಂಸ್ಕೃತಿಗಳ ಬಗೆಗೆ ಆಸಕ್ತಿ ಮೂಡಿಸಲು, 'ಕಲಾಭಾರತಿ' ಎಂಬ ಸಾರ್ವಜನಿಕ ಸಂಸ್ಥೆಯನ್ನು ಆರಂಭಿಸಿದೆವು. ನಮ್ಮ ತಾಯಿ ಇದರ ಪ್ರಥಮ ಪೋಷಕರು. ಹಲವಾರು ಹಿರಿಯರು, ಮಿತ್ರರು, ಇದರ ಸದಸ್ಯರಾದರು. ಡಾ॥ ವಿ. ಕೃ. ಗೋಕಾಕರು ಸಂಸ್ಥೆಯ ಪ್ರಥಮ ಅಧ್ಯಕ್ಷರು. ಡಾ॥ ಅ. ನ. ಕೃಷ್ಣರಾಯರು ಸಂಸ್ಥೆಯನ್ನು ಉದ್ಘಾಟಿಸಿದರು. ಡಾ॥ ವಿ. ಸೀತಾರಾಮಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಹಿರಿಯರಾದ ಡಾ॥ ಆರ್. ಎಸ್. ಪದ್ಮನಾಭನ್ ಮತ್ತು ಶ್ರೀಮತಿ ಕಮಲಾ ಪದ್ಮನಾಭನ್ ಅವರು ತಮ್ಮ ಮನೆಯಲ್ಲೇ ಕಲಾಭಾರತಿಯ ಚಟುವಟಿಕೆಗಳನ್ನು ನಡೆಸಲು ಅವಕಾಶ ನೀಡಿದರು.

ಈ ಹತ್ತು ವರುಷಗಳಿಂದ 'ಕಲಾಭಾರತಿ' ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಸಾಹಿತ್ಯ – ಕಲೆ – ಸಾಂಸ್ಕೃತಿಕ ಬೆಳವಣಿಗೆಗೆ ಪೋಷಕವಾಗಿದೆ. ಯುವ ಜನಾಂಗದ ಪ್ರತಿಭೆಗೆ ಪುರಸ್ಕಾರ ನೀಡಿದೆ.

ಸಂಸ್ಥೆಗೆ ಹತ್ತು ವರುಷ ತುಂಬಿರುವಾಗ ಈ ಸಂಸ್ಥೆಯ ಆರಂಭಕ್ಕೆ ಕಾರಣರಾದ, ಎಂದಿಗೂ ನಮಗೆ ಸ್ಫೂರ್ತಿದಾಯಕರಾದ ನಮ್ಮ ಬಾಳಬೆಳಕಾದ ನಮ್ಮ ತಂದೆ ಶ್ರೀ ಸಿ. ನರಸಿಂಹಮೂರ್ತಿ, ತಾಯಿ ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿ ಇವರಿಗೆ ಈ ಗ್ರಂಥ ಅರ್ಪಿತವಾಗುತ್ತಿದೆ.

ಈ ಗ್ರಂಥಕ್ಕೆ ಪ್ರೀತಿಯಿಂದ ಲೇಖನಗಳನ್ನು ಬರೆದುಕೊಟ್ಟ ನಮ್ಮ ಬಂಧುಗಳಿಗೂ ಹಿರಿಯರಿಗೂ ಮಿತ್ರರಿಗೂ ನಾನು ಕೃತಜ್ಞಳಾಗಿದ್ದೇನೆ.

22 ಡಿಸೆಂಬರ್ 1979
ಬೆಂಗಳೂರು

**ಚಿ. ನ. ಮಂಗಳಾ**

# ಮೂರ್ತಿ

ವಿ. ಕೃ. ಗೋಕಾಕ್

ನುಂಗುತ್ತ ನಿನ್ನ ಅಳು, ಅವರಿವರ ಕಣ್ಣೊರಸಿ,
ಬಾಳುವದೆ ಬಾಳ ತಿರುಳು;
ಎಂದು ಕುಲುಕುಲು ನಗುತ ಕಣ್ಮರೆಸಿ ಮರೆಯಾದೆ
ಎಲ್ಲರನು ಮಾಡಿ ಮರುಳು ·

ಸೇವಾ ನಿವೃತ್ತನಿಹ ಪೂರ್ವದಲಿ ನೀನಾದೆ
ಜೀವನ ನಿವೃತ್ತ ಸಖನು
ಪಂಜರವ ನಿದ್ದೆಯಲಿ ತೊರೆಯುವ ವಿದ್ಯೆ
ತಿಳಿದಿರಲು, ನಿತ್ಯಸುಖನು

ನನ್ನ ಕನಸಾಗಿರುವಿ, ನನ್ನ ನನಸಾಗಿರುವಿ
ನನ್ನ ದೈನಂದಿನದ ಬಾಳ ಸ್ಫೂರ್ತಿ
ನನ್ನ ಚೈತನ್ಯದೊಡನೊಂದಾಗಿರುವಿ ನೀನು,
ಮಾಯವಾದರು ನಿನ್ನ ಮೃಣ್ಮಯದ ಮೂರ್ತಿ

ನಾನು ಬಾನ್ ನೀನು ಮಿನುಗುವ ತಾರೆ ಬಾನಿನೊಳು
ನಾ ಭೂಮಿ ನೀ ಹೊಮ್ಮುತಿರುವ ನಿರ್ಝರವು
ನಾ ಹೃದಯ ನೀನು ಉಕ್ಕೇರುತಿಹ ಪ್ರೇರಣೆಯು,
ನಿರ್ಮಲ ನಿನ್ನ ಬುದ್ಧಿ, ಹೃದ್ಭಾವ ನಿರ್ಭರವು.

ಇಳೆಯೊಳಿನ್ನೊಮ್ಮೆ ಕೆಳೆಯಾಟ ಆಡೋಣ ಬಾ.
ಅಶ್ವಿನಿಗಳಂತಮರ ಯಮಳರಾಗಿ !
ಎಲ್ಲ ಕಂಬನಿ ಒರಸಿ, ಹಿಗ್ಗುಹೊಳೆಗಳ ಹರಿಸಿ
ಬಾಳೋಣ ಸತ್ಕೀರ್ತಿಧವಲರಾಗಿ !

# ಸಾಹಿತಿಯೆಂದರೆ ಅಷ್ಟು ಪ್ರೀತಿ

**ಶಾರದಾ ಗೋಕಾಕ್**

1956ರಲ್ಲಿ ಪ್ರಾಂತಗಳ ಪುನರ್‌ರಚನೆಯಾದಾಗ ದಿ॥ ಶ್ರೀ ನರಸಿಂಹಮೂರ್ತಿ, ಐ. ಎ. ಎಸ್. ಅವರು ಡಿ. ಪಿ. ಐ. ಆಗಿದ್ದರು. ಎಲ್ಲ ಸರಕಾರಿ ಕಾಲೇಜುಗಳೂ ಅವರ ಮೇಲ್ವಿಚಾರಣೆಯಲ್ಲಿ ಬಂದುದರಿಂದ ಗೋಕಾಕರು ಆಗ ಪ್ರಿನ್ಸಿಪಾಲರಾಗಿದ್ದ ಕರ್ನಾಟಕ ಕಾಲೇಜೂ ಸಹ ಅವರಿಗೆ ಅಧೀನವಾಗಿತ್ತು. ಅರ್ಥಾತ್ ಅವರೇ ಗೋಕಾಕರ ಮೇಲಿನ ಅಧಿಕಾರಿಗಳಾದರು. ಅವರು ಮೊದಲನೆಯ ಸಲ ಉತ್ತರ ಕರ್ನಾಟಕದ ಪ್ರವಾಸದ ಕಾರ್ಯವನ್ನು ಕೈಗೊಂಡಾಗ ಧಾರವಾಡಕ್ಕೆ ಬಂದರು. ಆಗ ವಾಡಿಕೆಯಾಗಿ ಎಲ್ಲ ಅಧಿಕಾರಿಗಳೂ ಹೋಗಿ ಮೇಲಿನಧಿಕಾರಿಗಳಿಗೆ ಭೇಟಿಯಾಗುವಂತೆ ಗೋಕಾಕರೂ ಗೌರವವನ್ನು ಸೂಚಿಸಲು ಹೋಗಿದ್ದರು. ಎಲ್ಲರ ಪರಿಚಯ ಮಾಡಿಕೊಡುತ್ತ ಸ್ಥಳೀಯ ವಿದ್ಯಾಧಿಕಾರಿಗಳು "ಇವರು ಪ್ರಿ. ಗೋಕಾಕ"ರೆಂದು ಹೇಳಿದಾಗ ನರಸಿಂಹಮೂರ್ತಿಯವರು "ನೀವೇಕೆ ಇಲ್ಲಿಗೆ ಬಂದಿರಿ ? ನಾನು ನಿಮ್ಮನ್ನು ನಿಮ್ಮ ಮನೆಗೆ ಬಂದು ಭೇಟಿಯಾಗಬೇಕು" ಎಂದು ಅವರನ್ನು ತಮ್ಮ ಕಾರಿನಲ್ಲಿ ಕೂಡಿಸಿ ವಾಪಸು ಮನೆಗೆ ಕಳಿಸಿದರು ! ಸಾಹಿತಿಯೆಂದರೆ ಅವರಿಗೆ ಅಷ್ಟು ಪ್ರೀತಿ. ಆದರ ಮರುದಿನ ರಾತ್ರಿ ನಮ್ಮ ಮನೆಯಲ್ಲಿ ತಮ್ಮ ಸಹೋದ್ಯೋಗಿಗಳನ್ನೆಲ್ಲಾ ಕರೆದು ನರಸಿಂಹಮೂರ್ತಿಯವರಿಗಾಗಿ ಗೋಕಾಕರು ಭೋಜನ ಕೂಟವನ್ನು ಏರ್ಪಡಿಸಿದರು. ಅವರ ನಡುವೆ ಬೆಳೆದು ಬಂದ ಈ ಮೈತ್ರಿ ಎರಡು ಕುಟುಂಬಗಳನ್ನು ಹತ್ತಿರ ತಂದಿತು; ಚಿರಸ್ಥಾಯಿಯಾಯಿತು. ಸದಾಶಿವ ನಗರದಲ್ಲಿ ಅದೇ ತಾನೆ ನರಸಿಂಹಮೂರ್ತಿಯವರ ಹೊಸ ಮನೆ ಕಟ್ಟಿ ಸಿದ್ಧವಾಗಿತ್ತು. ಅದರ ವಾಸ್ತು ಸಮಾರಂಭಕ್ಕಾಗಿ ಅವರು ನಮ್ಮನ್ನೆಲ್ಲ ಆಮಂತ್ರಿಸಿದ್ದರು. ಅಲ್ಲಿಯೇ ಊಟವಾಯಿತು. ಮಾತಿಗೆ ಮಾತು ಬಂದು ಸಹಜವಾಗಿ ಅವರು ಗೋಕಾಕರನ್ನು ಕೇಳಿದರು : "ನೀವೇಕೆ ಬೆಂಗಳೂರಿನಲ್ಲಿ ಮನೆ ಕಟ್ಟುವುದಿಲ್ಲ ?" ಗೋಕಾಕರು ಹೇಳಿದರು. "ನಮಗೆ ಸ್ವಲ್ಪ ದರದಲ್ಲಿ ಪ್ಲಾಟು ಯಾರು ಕೊಡುತ್ತಾರೆ ? ಸಿಕ್ಕರೆ ಕಟ್ಟಿಸುತ್ತೇನೆ." ಮೂರ್ತಿಯವರು "ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ್ ಬೋರ್ಡಿನಿಂದ ನಿಮಗೆ ದೊರೆಯುವ ಹಾಗೆ ನಾನು ಯತ್ನಿಸುತ್ತೇನೆ" ಎಂದು ಹೇಳಿದರು. ನಂತರ ಗೋಕಾಕರು "ಪ್ಲಾಟು ದೊರಕಿದರೆ ಖಂಡಿತ ಇಲ್ಲಿ ನಾನು ಮನೆ ಕಟ್ಟುತ್ತೇನೆ" ಎಂದರು. ಹೋಗುವಾಗ ನರಸಿಂಹಮೂರ್ತಿಯವರು ಗೋಕಾಕರಿಂದ ಒಂದು ಅಪ್ಲಿಕೇಶನ್ ಮೇಲೆ ಸಹಿ ಮಾಡಿಸಿಕೊಂಡರು. ಸಹಿ ಮಾಡಿದ ಗೋಕಾಕರು ಹೈದ್ರಾಬಾದಿಗೆ ಮರಳಿದ ಮೇಲೆ ಆ ವಿಷಯವನ್ನೇ ಮರೆತಿದ್ದರು. ಆದರೆ ಒಂದು ದಿನ ಸಿ. ಐ. ಟಿ. ಬಿ. ಇಂದ ಕಾಗದ ಬಂತು. ರಾಜಮಹಲು ವಿಳಾಸದಲ್ಲಿ 525ನೇ ಪ್ಲಾಟು ಕೊಡಲಾಗಿದೆಯೆಂದೂ ಕನಿಷ್ಠ ಹತ್ತು ವರ್ಷಗಳೊಳಗೆ ಮನೆ ಕಟ್ಟಿಸಬೇಕೆಂದೂ ಆ ಪತ್ರದಲ್ಲಿ ಕಾಣಿಸಿತ್ತು. ಗೋಕಾಕರಿಗೆ ಆಶ್ಚರ್ಯವಾಯಿತು. ಒಲುಮೆಯ ಕೃತಜ್ಞತೆಗಳನ್ನು ಸಲ್ಲಿಸಿ ಅವರು ನರಸಿಂಹಮೂರ್ತಿಯವರಿಗೆ ಪತ್ರ ಬರೆದರು.

('ಒಲವೆ ನಮ್ಮ ಬದುಕು' ಕೃತಿಯಿಂದ)

# ನನ್ನ ತಮ್ಮ

ಕೆ. ಆರ್. ಲಲಿತಮ್ಮ

---

ನಮ್ಮ ತಂದೆ ಶ್ರೀ ಚಿದಂಬರರಾಯರು. ನಮ್ಮ ತಾಯಿ ಸೌ॥ ಸಾವಿತ್ರಮ್ಮ – ಅನುರೂಪ ದಾಂಪತ್ಯ. ಆರು ಜನ ಹೆಣ್ಣುಮಕ್ಕಳು, ಇಬ್ಬರು ಗಂಡು ಮಕ್ಕಳು. ಹಿರಿಯ ಮಗನೇ ನರಸಿಂಹಮೂರ್ತಿ. ಜನನ 5 ಜನವರಿ 1911ರಲ್ಲಿ. ನಮ್ಮೂರು ಅಗ್ರಹಾರ.

ಬಾಲ್ಯದಿಂದಲೂ ಕಷ್ಟಸಹಿಷ್ಣುತೆ – ವಿದ್ಯಾ ವ್ಯಾಸಂಗದಲ್ಲಿ ವೈಶಿಷ್ಟ್ಯತೆ – ಮೈಸೂರು ರಾಜ್ಯದ ಮಹೋನ್ನತ ಶಾಲೆಗಳಲ್ಲಿ ಒಂದಾದ ಶ್ರೀ ಶಾರದಾ ವಿಲಾಸ ಹೈಸ್ಕೂಲಿನಲ್ಲಿ ಪ್ರತಿಭಾವಂತ ವಿದ್ಯಾರ್ಥಿ ನರಸಿಂಹಮೂರ್ತಿ. ಅನಂತರ ಕಾಲೇಜು ವಿದ್ಯಾಭ್ಯಾಸ. ಅನಾಥಾಲಯದಲ್ಲಿ ಆಶ್ರಯ. 'ಮೈಸೂರು ತಾತಯ್ಯ' ಶ್ರೀ ವೆಂಕಟ ಕೃಷ್ಣಯ್ಯನವರ ಆಪ್ತ ಶಿಷ್ಯ. ಅರ್ಥಶಾಸ್ತ್ರದಲ್ಲಿ ಉನ್ನತ ದರ್ಜೆಯಲ್ಲಿ ಎಂ. ಎ. ಪದವಿ ಗಳಿಕೆ. ಸುವರ್ಣ ಪದಕಗಳ ಸರಮಾಲೆ. ಮೈಸೂರು ಮಹಾರಾಣೀ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಅಧ್ಯಾಪಕ. ಹಾಗೆಯೇ 'ತಾಯಿನಾಡು' ಪತ್ರಿಕಾ ಪ್ರತಿನಿಧಿ.

ನಂತರ 1937ರಲ್ಲಿ ಎಂ. ಸಿ. ಎಸ್. ಪರೀಕ್ಷೆಯಲ್ಲಿ ಅಗ್ರಸ್ಥಾನ ಗಳಿಕೆ. ಸರ್ಕಾರದ ಸೇವಾರಂಭ. ಶ್ರೀಮಂತ ಪುತ್ರಿ ಸದ್ಗುಣಗಳ ಗಣಿ ಸೌ॥ ರಾಜೇಶ್ವರಿಯೊಂದಿಗೆ ವಿವಾಹ. ಆದರ್ಶ ದಾಂಪತ್ಯ. ಸುಖದ ಸಂಸಾರ. ದೊಡ್ಡ ಸಂಸಾರದ ನಿರ್ವಹಣೆ.

1938 ಸೆಪ್ಟೆಂಬರ್‌ನಲ್ಲಿ ನನ್ನ ಯಜಮಾನರ ಆಕಸ್ಮಿಕ ಮರಣ. ನನ್ನ ಮಕ್ಕಳ ಮತ್ತು ನನ್ನ ಸಂಸಾರದ ಸಂಪೂರ್ಣ ಜವಾಬ್ದಾರಿ ನನ್ನ ತಮ್ಮನ ಮೇಲೆ. 1938ರಿಂದ 1950ವರೆವಿಗೆ 12 ವರ್ಷಗಳ ಕಾಲ ನಮ್ಮ ಸಂಸಾರದ ಹೊಣೆಗಾರಿಕೆ ನನ್ನ ತಮ್ಮನಿಂದ. ನಮ್ಮ ಭಾಗದ ದೇವರಾಗಿದ್ದ. ಮಕ್ಕಳ ವಿದ್ಯಾಭ್ಯಾಸ, ಮಕ್ಕಳ ಅಭಿವೃದ್ಧಿ, ಹೆಣ್ಣುಮಕ್ಕಳಿಗೆ ಮದುವೆಗೆ ಸಹಾಯ, ಮಗನಿಗೆ ಉದ್ಯೋಗಾವಕಾಶ, ಒಂದೇ ಎರಡೇ, ಹಲವಾರು ಕಾರ್ಯಗಳಲ್ಲಿ ನಮಗೆ ಸಹಾಯ.

ನಮಗೆ ಮಾತ್ರವಲ್ಲ, ಉಳಿದ ಅಕ್ಕ ತಂಗಿಯರಿಗೂ, ಅವರ ಮಕ್ಕಳಿಗೂ ಸಹಾಯ ಸೌಲಭ್ಯಗಳು. ಅನಾಥಾಲಯಕ್ಕೆ ಪ್ರತಿ ಮಾಹೆಯೂ ಚಂದಾ ಹಣ. ಬಡಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಸಹಾಯ, ಶ್ರೀ ರಾಮಕೃಷ್ಣ ಆಶ್ರಮಕ್ಕೆ ಸಹಾಯ, ಅಲ್ಲದೆ ಅನೇಕರಿಗೆ ಅನೇಕ ರೀತಿಯ ಸಹಾಯಗಳು ನನ್ನ ತಮ್ಮನಿಂದ.

ಸರಕಾರದ ನಾನಾ ಇಲಾಖೆಗಳಲ್ಲಿ ಕಳಂಕರಹಿತ ಕೀರ್ತಿಶಾಲೀ ಸೇವೆ, ಶ್ರೀಮನ್ಮಹಾರಾಜರು, ದಿವಾನರು, ಮುಖ್ಯಮಂತ್ರಿಗಳು, ಮಂತ್ರಿವರ್ಯರು, ಸಾರ್ವಜನಿಕರು, ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳಿಂದ ತಮ್ಮನ ಸೇವೆಯ ಶ್ಲಾಘನೆ.

ಚಿಕ್ಕದಾದ, ಚೊಕ್ಕವಾದ, ಚೆನ್ನಾದ ಸಂಸಾರ. ಪ್ರೀತಿಯ ಹೆಂಡತಿ, ಮುದ್ದಿನ ಮೂರು ಹೆಣ್ಣುಮಕ್ಕಳು, ಹಿರಿಯ ಮಗಳು ಮಂಗಳಾ, ಎರಡನೆಯವಳು ಲಕ್ಷ್ಮಿ ಮೂರನೆಯವಳು ವಾಣಿ, ಏಕಮಾತ್ರ ಪುತ್ರ ಚಂದ್ರಶೇಖರ.

ನನ್ನ ತಮ್ಮ ಸದ್ಗುಣಗಳ ಗಣಿ, ಒಂದಾದರೂ ಕೆಟ್ಟ ಅಭ್ಯಾಸವಿಲ್ಲ. ಸಂಸ್ಕೃತಿಯ ಸ್ವರೂಪ, ನಾಗರೀಕತೆಯ ಪರಾಕಾಷ್ಠೆ, ಮಾನವೀಯತಾದೃಷ್ಟಿ, ಕೆಲಸದಲ್ಲಿ ನಿಷ್ಠೆ, 'ಕಾಯಕವೇ ಕೈಲಾಸ' ಮನೋಭಾವನೆ, ಒಮ್ಮೊಮ್ಮೆ ಸಿಟ್ಟು ಬಂದಾಗ ಮಾತ್ರ ಉಗ್ರ ನರಸಿಂಹಮೂರ್ತಿ. ಯಾವಾಗಲೂ ಶಾಂತಚಿತ್ತ ಶ್ರೀ ಲಕ್ಷ್ಮೀನರಸಿಂಹಸ್ವಾಮಿ.

1968 ಮೇ ಮಾಹೆ ತಾರೀಖು 1. ಎರಡನೆಯ ಮಗಳು ಸೌ॥ ಲಕ್ಷ್ಮಿಯ ವಿವಾಹ. ಸದಾಶಿವನಗರದ ಸ್ವಗೃಹದಲ್ಲಿ, ವೈಭವದ ವಿವಾಹ, ಸಂತೋಷ ಸಮಾರಂಭಗಳು, ಪುಟ್ಟಪರ್ತಿ ಶ್ರೀ ಸತ್ಯ ಸಾಯಿಬಾಬಾರವರ ಆಗಮನ, ಆಶೀರ್ವಾದ ಅನುಗ್ರಹ, ಆದರೂ ಶ್ರೀ ಬಾಬಾರವರ ವದನದಲ್ಲಿ ಆತಂಕ ಚಿನ್ಹೆ; ಕಾರಣ, ಕಾರಣ – ಕಾರಣ ?

1968 ಮೇ ತಾರೀಖು 7, ರಾತ್ರಿ ಮದುವೆಯ ಮೂವತ್ತೊಂದನೆಯ ವಾರ್ಷಿಕೋತ್ಸವ. ಮಕ್ಕಳಿಂದ ಸಂತೋಷ ಕೂಟ, ಆನಂದದ ಆಗರ, ಆಯಾಸದಿಂದ ರಾತ್ರಿ 12 ಗಂಟೆಗೆ ನಿದ್ರಾದೇವಿಯ ವಶ.

ಬೆಳಗಿನ ಜಾವದ ಹೊತ್ತಿಗೆ ನನ್ನ ತಮ್ಮ ಚಿರನಿದ್ರೆಯಲ್ಲಿ ಮುಳುಗಿದ್ದ. ಸುಖವಾದ ಸಾವು. ಪರಮಾತ್ಮನ ಪಾದಾರವಿಂದ ಸೇರಿದ. ಎಲ್ಲೆಲ್ಲೂ ಕೋಲಾಹಲ, ಕರಾಳ ಛಾಯೆ, ಶೋಕ ಸಾಗರ ಗೃಹ. ಸಾವಿರಾರು ಮಂದಿ ಗಣ್ಯರ ಆಗಮನ, ಅಂತ್ಯ ದರ್ಶನ, ಸರ್ವರಿಂದಲೂ ತಮ್ಮನ ಜೀವನ ಸೇವೆ, ಸಹಾಯಗಳ ಶ್ಲಾಘನೆ, ನಮ್ಮ ಕುಟುಂಬದ ಕೀರ್ತಿಕಳಸದ ಕಣ್ಮರೆ, ನಮ್ಮ ಸಂಸಾರದ ನಂದಾದೀಪದ ಉಜ್ವಲ ಜ್ಯೋತಿಯ ಅಸ್ತ.

ನನ್ನ ತಮ್ಮನಂತಹ ವ್ಯಕ್ತಿತ್ವ ಬಹುಶಃ ಇನ್ನೊಬ್ಬರಲ್ಲಿ ಇಲ್ಲ. ಅಲ್ಪಾಯುಷಿಯಾದರೂ ಜೀವನದ ಸಾರ್ಥಕ ಸಾಧನೆ. ನಿಧನವಾದಾಗ ಕೇವಲ 56 ವರ್ಷಗಳು ಮಾತ್ರ. ನಿವೃತ್ತನಾಗಿ ವಿಶ್ರಾಂತಿ ವಿರಾಮಗಳನ್ನು ಅನುಭವಿಸುವ ಅವಕಾಶ ರಹಿತನಾಗಿ ಜೀವನ ಪರ್ಯಂತ ದುಡಿಮೆ, ಸೇವೆ.

ನರಸಿಂಹಮೂರ್ತಿ ಕಾಯಕದ ಕೀರ್ತಿ. ಇಂತಹ ಮಗನನ್ನು ಪಡೆದ ನಮ್ಮ ತಂದೆ ತಾಯಿ, ತಮ್ಮನನ್ನು ಪಡೆದ ನಮ್ಮ ಅಕ್ಕ ತಂಗಿಯರು, ಪತಿಯನ್ನಾಗಿ ಪಡೆದ ನಾದಿನಿ ರಾಜೇಶ್ವರಿ, ತಂದೆಯನ್ನಾಗಿ ಪಡೆದ ಅವನ ಮಕ್ಕಳು, ಎಲ್ಲರೂ ಧನ್ಯರು. ನೆರಳಿನೋಪಾದಿಯಲ್ಲಿ ಪತಿಯ ಸೇವೆ ಸಲ್ಲಿಸಿದ ರಾಜೇಶ್ವರಿ ಪತಿಯ ಸಾವಿನಿಂದ ಕೊರಗಿ ತಮ್ಮ ನಿಧನನಾದ ನಾಲ್ಕಾರು ವರ್ಷಗಳಲ್ಲೇ ನಿಧನಳಾದಳು. ತಮ್ಮ ನಾದಿನಿಯರ ಜೀವಕ್ಕೆ ಶಾಂತಿ ಕೋರಿ, ಅವನ ಮಕ್ಕಳಿಗೆ ಮುಂದೆ ಎಂದೆಂದಿಗೂ ಸಕಲ ಶ್ರೇಯಸ್ಸನ್ನು ಹಾರೈಸಿ ತಮ್ಮನನ್ನು ಸದಾ ನೆನಸುತ್ತೇನೆ.

# ಅಣ್ಣಯ್ಯ

**ಜೆ. ಜೆ. ನಂಜಮ್ಮ**

---

ನನ್ನ ಮದುವೆಯಾದ ಹೊಸದರಲ್ಲಿ ನನ್ನ ಪೂಜ್ಯ ತಾಯಿಯವರು ಸ್ವರ್ಗಸ್ಥರಾದ ಸಮಯದಲ್ಲಿ ನನ್ನನ್ನು ನಮ್ಮ ಅಣ್ಣನವರಾದ ಸಿ. ನರಸಿಂಹಮೂರ್ತಿಯವರು ತಮ್ಮ ಮನೆಗೆ ಕರೆಸಿಕೊಂಡು ಬಹಳವಾಗಿ ಸಮಾಧಾನ ಮಾಡಿದ್ದು ಈಗಲೂ ನನ್ನ ಮನಸ್ಸಿನಲ್ಲಿ ಹಸಿರಾಗಿದೆ. ನಾನು ಒಂದು ಸಣ್ಣ ಹಳ್ಳಿಯಲ್ಲಿದ್ದರೂ ಸಹ ಅವರು ನನ್ನನ್ನು ತಾವು ಕೆಲಸದಲ್ಲಿದ್ದ ಮದರಾಸಿಗೆ ಕರೆಸಿಕೊಂಡು ಅಲ್ಲಿ ನೋಡಬೇಕಾದ ಸ್ಥಳಗಳನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿ ತೋರಿಸಿದರು. ಹಾಗೂ ನಾನು ಅಲ್ಲಿ ಇದ್ದಷ್ಟು ದಿವಸಗಳೂ ಸಹ ಬಹಳ ಸಂತೋಷದಿಂದ ನನ್ನನ್ನು ನೋಡಿಕೊಂಡರು. ಇದೇ ರೀತಿ ಅವರು ಮೈಸೂರು ವಿಭಾಗದ ವಿಭಾಗಾಧಿಕಾರಿಗಳಾಗಿದ್ದ ಕಾಲದಲ್ಲಿ ಸರ್ಕಾರದ ಪರವಾಗಿ ಚನ್ನರಾಯಪಟ್ಟಣ ತಾಲ್ಲೂಕು, ಶ್ರವಣಬೆಳಗೊಳದಲ್ಲಿ ಶ್ರೀ ಗೊಮ್ಮಟೇಶ್ವರ ಸ್ವಾಮಿಯವರಿಗೆ ಮಹಾ ಮಸ್ತಕಾಭಿಷೇಕ ನಡೆಯುವ ಸಮಯದಲ್ಲಿ ಅಲ್ಲಿಗೆ ಭೇಟಿ ಇತ್ತರು. ಬಿಡುವಿಲ್ಲದ ಕೆಲಸದಲ್ಲೂ ಬಿಡುವು ಮಾಡಿಕೊಂಡು ನಮ್ಮ ಊರಾದ ಜಂಬೂರಿಗೆ ನನ್ನ ಮನೆಗೆ ನನ್ನ ಪ್ರೀತಿಯ ಅತ್ತಿಗೆಯವರ ಜೊತೆಯಲ್ಲಿ ಬಂದು ಕೆಲವಾರು ಘಂಟೆಗಳು ಸಂತೋಷದಿಂದ ಕಾಲ ಕಳೆದು ನಂತರ ಮೈಸೂರಿಗೆ ಪ್ರಯಾಣ ಮಾಡಿದರು. ನಮ್ಮ ಅಣ್ಣನವರಿಗೆ ಚಿತ್ರಾನ್ನ, ಕಡಲೆಕಾಯಿ ಬಿತ್ತದ ಉಂಡೆ, ಮಿಠಾಯಿ ಕಂಡರೆ ಬಹಳ ಇಷ್ಟ. ಅವರು ಎಷ್ಟು ದೊಡ್ಡ ಕೆಲಸದಲ್ಲಿದ್ದರೂ ಇಲ್ಲಿಗೆ ಅಂದರೆ ನಮ್ಮ ಮನೆಗೆ ಬಂದಾಗ ನನ್ನ ಕೈಲಿ ಹೇಳಿ ಮಾಡಿಸಿಕೊಂಡು ತಿನ್ನುತ್ತಿದ್ದರು.

ನನ್ನ ಅಕ್ಕರೆಯ ಅಣ್ಣನವರನ್ನು ಪಡೆದಿದ್ದು ನನ್ನ ಪುಣ್ಯ. ಆದರೆ ಇಷ್ಟು ಬೇಗ ಅವರು ನಮ್ಮನ್ನು ಅಗಲಿದ್ದು ನಮ್ಮಗಳ ದೌರ್ಭಾಗ್ಯ.

# ನನ್ನ ಸೋದರಮಾವ

**ನಾಗರತ್ನ ವೆಂಕಟೇಶ್**

ನಾನು ಕಂಡಂತೆ, ಸಾಮಾನ್ಯವಾಗಿ ಒಂದೇ ವ್ಯಕ್ತಿಯಲ್ಲಿ ವಿದ್ಯೆ, ವಿನಯ, ರೂಪ ಮತ್ತು ಗುಣ ಎಲ್ಲವೂ ಮಿಳಿತವಾಗಿರುವುದು ಬಲು ಅಪರೂಪ. ಆದರೆ ಇವರಲ್ಲಿ ಎಲ್ಲವೂ ಸೇರಿ ಜೇನುತುಪ್ಪಕ್ಕೆ ಸಕ್ಕರೆ ಬೆರೆಸಿದಂತಿತ್ತು.

ನಮ್ಮ ಸೋದರಮಾವನದು ನೋಡಲು ತುಂಬಾ ಸುಂದರ ರೂಪು. ಹೊಳಪಿನ ಕಣ್ಣುಗಳು. ಸಣ್ಣ ಸಣ್ಣ ಗುಂಗುರು ಕೂದಲು. ದುಂಡಗಿನ ಅಗಲವಾದ ಮುಖ. ಒಂದು ಸಾರಿ ನೋಡಿದರೆ ಮತ್ತೊಮ್ಮೆ ನೋಡುವಂಥಾ ವ್ಯಕ್ತಿತ್ವ.

ನಾನು ನೋಡಿದಾಗಿನಿಂದಲೂ ಇದುವರೆಗೂ ಒಬ್ಬರ ಮನಸ್ಸನ್ನೂ ನೋಯಿಸದಂತೆ ಎಲ್ಲರ ಮನಸ್ಸನ್ನೂ ಅರಿತು ಎಲ್ಲರಿಗೂ ದಾರಿದೀಪವಾಗಿದ್ದರು. ತುಂಬಾ ಕಷ್ಟಪಟ್ಟು ಮೈಸೂರಿನ ಅನಾಥಾಲಯದಲ್ಲಿದ್ದುಕೊಂಡು ಓದಿ ಮುಂದೆ ಬಂದಿದ್ದರು. ಮತ್ತು ಎಲ್ಲದರಲ್ಲೂ Rankನಲ್ಲೇ ಪಾಸು ಮಾಡಿದ್ದರು. ಯಾವಾಗಲೂ ಅವರಿಗೆ ಕಷ್ಟಪಟ್ಟು ಚೆನ್ನಾಗಿ ಓದುವ ಹುಡುಗರನ್ನು ಕಂಡರೆ ತುಂಬಾ ಇಷ್ಟ. ಅವರುಗಳಿಗೆ ತುಂಬಾ ಸಹಾಯ ಮಾಡುತ್ತಿದ್ದರು. ಮತ್ತು ಮರೆಯದೆ ತಮಗೆ ಸಿರಿ ಬಂದಾಗಲೂ ಅನಾಥಾಲಯಕ್ಕೆ ಸಹಾಯ ಮಾಡುತ್ತಿದ್ದರು. ಇದೇ ರೀತಿ ಸಂಗೀತ, ಕಲೆ ಮುಂತಾದವು ಗಳಲ್ಲಿಯೂ ತುಂಬಾ ಆಸಕ್ತಿಯುಳ್ಳವರಾಗಿದ್ದರು.

ಹಿಂದೆ ತಾವು ಓದುತ್ತಿದ್ದಾಗಿನ ಸ್ನೇಹಿತರು ಯಾರಾದರೂ ತಮ್ಮನ್ನು ಹುಡುಕಿಕೊಂಡು ಬಂದರೆ ತಮ್ಮ ಶ್ರೀಮಂತಿಕೆಯನ್ನು ತೋರ್ಪಡಿಸದೆ ಅವರಲ್ಲಿ ಒಂದಾಗಿ ಬೆರೆತು ಅವರುಗಳ ಮನಸ್ಸಂತೋಷಪಡಿಸಿ ಕಳಿಸುತ್ತಿದ್ದರು.

ವೃತ್ತಿಯಲ್ಲಿಯಂತೂ ಅವರಂಥಾ ನಿಷ್ಠಾವಂತ ವ್ಯಕ್ತಿ ಬಲು ಅಪರೂಪ. ತಮ್ಮ ನಿಷ್ಠೆಯಿಂದಲೇ ಒಳ್ಳೆಯ ಹುದ್ದೆಯ ಒಂದೊಂದೇ ಮೆಟ್ಟಿಲುಗಳನ್ನೇರಿದ್ದರು. ದೇಶಕ್ಕೆ ಇನ್ನೂ ಅವರ ಸೇವೆ ಅಗತ್ಯವಿರುವಾಗಲೇ ವಿಧಿ ಅವರನ್ನು ಅರ್ಧಾಯಸ್ಸಿನಲ್ಲಿ ಅಕಾಲ ಮರಣಕ್ಕೀಡುಮಾಡಿತ್ತು.

ಕಲಾಭಾರತಿಯ ಹತ್ತನೆಯ ವರ್ಷಾಬ್ಧಿ ಸಂದರ್ಭದಲ್ಲಿ ಅವರ ಆತ್ಮಕ್ಕೆ ಚಿರಶಾಂತಿಯುಂಟಾಗಿ ದೈವ ಅವರು ನಡೆದು ಬಂದ ದಾರಿಯಲ್ಲೇ ನಮ್ಮನ್ನೂ ಎಲ್ಲರನ್ನೂ ನಡೆಸಿ, ಅವರ ಮನೆಯ ನಂದಾದೀಪ ಸದಾ ಶಾಂತಿಯಿಂದ ದಿವ್ಯವಾಗಿ ಬೆಳಗಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.

# ನರಸಿಂಹಮೂರ್ತಿ

ಎ. ಸೀತಾರಾಮಯ್ಯ

---

ನಾನು ಮೈಸೂರಿನ ಶಾರದಾ ವಿಲಾಸ್ ಹೈಸ್ಕೂಲಿನಲ್ಲಿ ಉಪಾಧ್ಯಾಯನಾಗಿದ್ದಾಗ ಶ್ರೀ ನರಸಿಂಹಮೂರ್ತಿ ಅವರು ಆ ಶಾಲೆಯಲ್ಲಿ 1925 - 27ರ ಸುಮಾರಿಗೆ ವಿದ್ಯಾರ್ಥಿಯಾಗಿದ್ದರು. ನಾನು ಆಗ ಇಂಗ್ಲೀಷ್ ಮತ್ತು ಅರ್ಥಶಾಸ್ತ್ರ ಎರಡು ಪಾಠಗಳನ್ನೂ ಮಾಡುತ್ತಿದ್ದೆ. ಅವರು V Formನಲ್ಲಿರುವಾಗ ಯಾವುದೋ ಒಂದು ಬರವಣಿಗೆಯಲ್ಲಿ ಬಹಳ ನಾಜೂಕಾಗಿ ಪ್ರಬಂಧವನ್ನು ಬರೆದರು. ಅಂದಿನಿಂದ ನನಗೆ ಅವರಲ್ಲಿ ವಿಶೇಷ ವಿಶ್ವಾಸವುಂಟಾಯಿತು. ನಾವು ಏನು ಹೇಳಿಕೊಟ್ಟೆವೊ ಬಿಟ್ಟೆವೊ ಅವರು ಏನು ಕಲಿತರೋ ನನ್ನಲ್ಲಿ ಕಡೆಯವರೆಗೂ ಬಹಳ ವಿಶ್ವಾಸ ಇಟ್ಟುಕೊಂಡಿದ್ದರು. ಅವರು ಆನರ್ಸ್ ಎಂ. ಎ. ಎರಡರಲ್ಲೂ ಅರ್ಥಶಾಸ್ತ್ರದಲ್ಲಿ ವಿಶೇಷ ವ್ಯಾಸಂಗ ಮಾಡಿ ಅರ್ಥಶಾಸ್ತ್ರ ಇಲಾಖೆಯ ಮುಖ್ಯಸ್ಥರಾಗಿದ್ದ ಪ್ರೊ॥ ವಿ. ಎಲ್. ಡಿ'ಸೋಜ ಅವರಿಗೆ ಪ್ರೀತಿಯ ಶಿಷ್ಯರಾದರು. ಡಿ'ಸೋಜ ಮೆಚ್ಚಿಕೊಂಡ ಕೆಲವು ವಿದ್ಯಾರ್ಥಿಗಳಲ್ಲಿ ನರಸಿಂಹಮೂರ್ತಿ ಮುಖ್ಯರು. ಆ ವೇಳೆಗಾಗಲೇ ಅರ್ಥಶಾಸ್ತ್ರ ವ್ಯಾಸಂಗ ನಮ್ಮ ಕಾಲದಿಂದ ಬಹಳ ಮುಂದುವರಿದಿತ್ತು. ಅಲ್ಲಿಂದೀಚೆಗೆ ಅವರು 'ತಾಯಿನಾಡು' ಪತ್ರಿಕೆಗೆ ಒಂದೆರಡು ಸಲ ಭರತಖಂಡದ ಹಣಕಾಸಿನ ಸಂಬಂಧದಲ್ಲಿಯೂ ವಿದೇಶಿ ವ್ಯಾಪಾರ ಸಂಬಂಧದಲ್ಲಿಯೂ ಕೆಲವು ಲೇಖನಗಳನ್ನು ಬರೆದರು. ತಾಯಿನಾಡು ಸಂಪಾದಕರಾದ ಪಿ. ಆರ್. ರಾಮಯ್ಯನವರು ನಮ್ಮ ಮನೆ ಎದುರಿನಲ್ಲಿಯೇ ಇದ್ದರು. ನರಸಿಂಹಮೂರ್ತಿಯವರ ಮೊದಲ ಒಂದೆರಡು ಲೇಖನಗಳನ್ನು ಅವರು ನನಗೆ ತೋರಿಸಿದರು. ಬರವಣಿಗೆ ಅಚ್ಚುಕಟ್ಟಾಗಿತ್ತು. ಸುಮಾರು 1937ರಲ್ಲಿ ಎಂ. ಸಿ. ಎಸ್.ನಲ್ಲಿ ತೇರ್ಗಡೆ ಹೊಂದಿ ಬೇಗ ಮೇಲ್ಮಟ್ಟದ ಸರ್ಕಾರಿ ಅಧಿಕಾರಿಗಳಾದರು. ಸುಮಾರು ಆ ಸಮಯದಲ್ಲಿಯೇ ಒಂದು ಒಳ್ಳೆಯ ಸಂಸಾರದಲ್ಲಿ ಅವರ ವಿವಾಹವನ್ನು ಏರ್ಪಡಿಸುವುದರಲ್ಲಿ ತಾತಯ್ಯನವರೆಂದು ಹೆಸರಾದ ಶ್ರೀ ಎಂ. ವೆಂಕಟಕೃಷ್ಣಯ್ಯನವರು ಅನುಕೂಲವನ್ನು ಕಲ್ಪಿಸಿದರು. ಗೆಲವು ಮುಖವುಳ್ಳವರೂ ಧಾರಾಳವಾಗಿ ಜನರಲ್ಲಿ ಮಾತನಾಡುವವರೂ ಸ್ನೇಹಪರರೂ ತಮ್ಮ ಕಾರ್ಯವನ್ನೂ ಹುದ್ದೆಯನ್ನೂ ಬಲ್ಲವರೂ ಆದ್ದರಿಂದ ಇಲಾಖೆಯ ಇತರರಿಗೆ ಹೇಗೋ ಹಾಗೆ ಜನಕ್ಕೂ ಪ್ರಿಯರಾದರು.

ಮುಂದೆ ನಾನು 1943ರಲ್ಲಿ ಮೈಸೂರಿಗೆ ಹೋದೆ. 43-44 ಎಂದು ಕಾಣುತ್ತದೆ. ವಿದ್ಯಾರ್ಥಿಗಳು ಮುಷ್ಕರ ಮಾಡಿದರು. ಮೂರ್ತಿ ಆಗ ನಗರದ ಮ್ಯಾಜಿಸ್ಟ್ರೇಟರಾಗಿದ್ದರು. ಮಹಾರಾಜಾ ಕಾಲೇಜಿನ ಹೊರಗೆ ಎಂ. ಎ. ಗೋಪಾಲಸ್ವಾಮಿ ಅವರೂ ನಾನು ಇತರ ಉಪಾಧ್ಯಾಯರೂ ಹುಡುಗರ ಪರವಾಗಿ ನಿಂತಿದ್ದೆವು. ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಲು ಬಂದ ನರಸಿಂಹಮೂರ್ತಿ ಕಾಲೇಜಿನ Porchವರೆಗೆ ಕೂಡ ಬರಲಿಲ್ಲ. ಅವರ

ಜೊತೆಯಲ್ಲಿ ಬಂದಿದ್ದ ಪೊಲೀಸ್ ಸಬ್ ಇನ್ಸ್‌ಪೆಕ್ಟರನ್ನು ನಾನು ಮಾತಾಡಿಸಿದೆ. "ನಾವು ಏನು ಮಾಡಲೂ ಸಾಧ್ಯವಿಲ್ಲ ಸಾರ್" ಎಂದರು ಮೂರ್ತಿ. ಆಗ ಬಹುಶಃ ಹ್ಯಾಮಿಲ್ಟನ್ ನಮ್ಮ ಸಂಸ್ಥಾನದಲ್ಲಿ ಪೊಲೀಸ್ ಇಲಾಖೆಯ ಪರಮಾಧಿಕಾರಿಯಾಗಿದ್ದರು. ಬ್ರಿಟಿಷ್ ಸಾಮ್ರಾಜ್ಯದ ಕಾಲ. ಅವರು ಇಂಗ್ಲೀಷರು, ಶಿಸ್ತಿನವರು. ದರ್ಪದವರು.

ನಾವಿದ್ದುದು ಎರಡು ಬಗೆಯ ದಾಸ್ಯ. ನಮ್ಮ ಸರಕಾರವೇ ಬ್ರಿಟಿಷರ ಅಂಕೆಗೆ ಒಳಪಟ್ಟಿತ್ತು. ನಾನು ಪುನಃ ನರಸಿಂಹಮೂರ್ತಿ ಅವರ ಬಳಿಗೆ ಬಂದು "ನಾನು ಒಂದು ಮಾತು ಹೇಳಬೇಕಾದ್ದಿದೆ" ಎಂದೆ.

ನಾಲ್ಕೈದು ಜನ ಹೆಣ್ಣುಮಕ್ಕಳು Strike ಮಾಡಿದವರ ಜೊತೆಯಲ್ಲಿದ್ದರು. ಅವರನ್ನೂ ಇತರರಂತೆ ಬಲಾತ್ಕಾರದಿಂದ ಕರೆದುಕೊಂಡು ಹೋಗಬೇಕಾಗಿತ್ತು. ಅವರಲ್ಲಿ ಒಬ್ಬಾಕೆ ನಮ್ಮಲ್ಲಿನ ಒಬ್ಬ ಉಪಾಧ್ಯಾಯರ ಮಗಳು. "ನಾನು ಹೇಳುವುದು ಇಷ್ಟೆ. ಕಾನೂನು ಹೇಗಿದೆಯೋ ಹಾಗೆ ಮಾಡಿ. ಆದರೆ ಹೆಣ್ಣುಮಕ್ಕಳನ್ನು ಪೊಲೀಸ್ ಲಾಕ್‌ಅಪ್‌ನಲ್ಲಿ ಇಡಬೇಡಿ. ಜೈಲಿಗೆ ಕರೆದುಕೊಂಡು ಹೋಗಿ" ಎಂದೆ. ಒಪ್ಪಿಕೊಂಡರು. ಶಕ್ಯವಾದರೆ ಹೆಣ್ಣುಮಕ್ಕಳನ್ನು ಬೇಗ ಬಿಟ್ಟುಬಿಡುತ್ತೇವೆ ಎಂದರು. ಆ ಅಧಿಕಾರಿಗಳಿಗೆ ನಾನು ಹೇಳಿದ್ದು ಸರಿಯೋ ತಪ್ಪೊ. ಅವರು ಧಾರಾಳವಾಗಿ ಒಪ್ಪಿಕೊಂಡು ಆ ರಾತ್ರಿಯೇ ಅವರನ್ನು ಬಿಟ್ಟುಕೊಟ್ಟರು ಎಂದು ಕಾಣುತ್ತದೆ. ಇವು ಸಣ್ಣ ಸಂದರ್ಭಗಳು.

ಆಮೇಲೆ ಹತ್ತಾರು ಸಲ ನಾನು ಅವರು ದೊಡ್ಡ ಅಧಿಕಾರಿಗಳಾದ ಮೇಲೂ ಕಂಡಿದ್ದೆ. ಒಂದೇ ವಿಶ್ವಾಸದಿಂದ ಅವರೂ ಅವರ ಮನೆಯವರೂ ನನ್ನನ್ನು ಕಂಡಿದ್ದಾರೆ.

ಸೆಂಟ್ರಲ್ ಕಾಲೇಜಿನಲ್ಲಿ ನಾನಿದ್ದಾಗ ಅವರ ಮಗಳು ಚಿ. ನ. ಮಂಗಳ ಅವರು ಕನ್ನಡದ ಒಬ್ಬ ವಿದ್ಯಾರ್ಥಿನಿಯಾಗಿದ್ದರು. ಅವರಿಗೆ ಪಂಪ ಭಾರತದ ಕೆಲವು ಭಾಗಗಳ ಪಾಠ ಮಾಡುತ್ತಿದ್ದೆನೆಂದು ಕಾಣುತ್ತದೆ. ಅವರ ವಿದ್ಯಾಶ್ರದ್ಧೆ ಅತಿಶಯವಾದದ್ದು. ಹೀಗೆ ಶ್ರೀ ನರಸಿಂಹಮೂರ್ತಿ ಅವರ ವಿದ್ಯಾರ್ಥಿದೆಸೆ, ಅವರ ಅಧಿಕಾರ ವ್ಯಾಪ್ತಿ. ಆ ತರುವಾಯದ ಅವರ ಮತ್ತು ಮನೆಯವರ ವಿಶ್ವಾಸ ಈ ಮೂರರಿಂದಲೂ ನನ್ನ ಮನಸ್ಸು ತುಂಬಾ ಸವಿಯಾದ ನೆನಪುಳ್ಳದ್ದಾಗಿದೆ. ಅವರನ್ನು ಕುರಿತು ಈ ಸ್ಮರಣ ಗ್ರಂಥ ಬರುವ ಸಮಯದಲ್ಲಿ ಅದನ್ನು ನೆನೆಸಿಕೊಳ್ಳುವುದು ನನಗೆ ಸಂತೋಷವುಂಟುಮಾಡಿದೆ.

# ಸ್ನೇಹದ ಸವಿನೆನಪು

**ಎಂ. ವಿ. ಸೀತಾರಾಮಯ್ಯ**

ಶ್ರೀಮತಿ ಚಿ. ನ. ಮಂಗಳ ಅವರು ತಮ್ಮ ಪೂಜ್ಯ ತೀರ್ಥರೂಪರವರಾದ, ಯಾರ ದಿವ್ಯವಾದ ಮೈತ್ರಿಗೂ ವಿಶ್ವಾಸಕ್ಕೂ ಪಾತ್ರನಾಗಿದ್ದೆನೋ ಆ ನನ್ನ ಪರಮ ಮಿತ್ರ ಕೀರ್ತಿಶೇಷ ಸಿ. ನರಸಿಂಹಮೂರ್ತಿಯವರನ್ನು ಕುರಿತು ಒಂದು ಜೀವನ ವೃತ್ತಾಂತ ಸ್ವರೂಪದ ಬರಹವನ್ನು ನನ್ನಿಂದ ಬಯಸಿದ್ದಾರೆ. ಕಲಾಪ್ರಿಯರಾಗಿದ್ದ ನರಸಿಂಹಮೂರ್ತಿಯವರ ನೆನಪಿಗೆಂದು ಸ್ಥಾಪನೆಗೊಂಡ ಕಲಾಭಾರತಿಗೆ ಹತ್ತು ವರುಷ ತುಂಬಿದೆ. ಅದು ಚಿರಕಾಲ ಉಳಿದು, ನನ್ನ ಮಿತ್ರನ ನೆನಪನ್ನು ಹಸಿರಾಗಿ ಇರಿಸಿರಲಿ ಎಂದು ಹಾರೈಸಿ, ನಮ್ಮಿಬ್ಬರ ಸ್ನೇಹ ಸ್ವರೂಪದ ಬಗೆಗೆ ನಾಲ್ಕು ಮಾತು ಹೇಳುತ್ತೇನೆ. ನಮ್ಮಿಬ್ಬರ ನಡುವೆ ಏಕವಚನ ಸಂಬೋಧನೆಯ ಸಲಿಗೆ ಇತ್ತು. ಇದರಿಂದ ನಮ್ಮ ಸ್ನೇಹದ ಸ್ವಭಾವವನ್ನು ಅರಿಯಬಹುದು. (ಲೇಖನ ಮರ್ಯಾದೆಯ ಸಲುವಾಗಿ ಬಹುವಚನವನ್ನೇ ಬಳಸುತ್ತಿದ್ದೇನೆ.) ಆದರೂ ನಮ್ಮಿಬ್ಬರ ಜೀವನ ವಿವರಗಳನ್ನು ಪರಸ್ಪರ ಕೇಳಿ ತಿಳಿದುಕೊಳ್ಳುವ ಕುತೂಹಲ ನಮ್ಮನ್ನು ಎಂದೂ ಕಾಡಲಿಲ್ಲ. ಎಂದೂ ಹದಗೆಡದ ಸ್ನೇಹದಿಂದಷ್ಟೆ ನಾವು ಸಂತೃಪ್ತರು. ಚಿ. ಎಂದರೆ ಜನ್ಮಸ್ಥಳಸೂಚಿ, ನನ್ನ ಪೂರ್ವಜರ ಊರೇ ಆದ ಚಿಕ್ಕನಾಯಕನಹಳ್ಳಿ ಎಂದುಕೊಂಡಿದ್ದೆ. ಅದು ಆತನ ತಂದೆ ಚಿದಂಬರಯ್ಯನವರ ಹೆಸರಿನ ಮೊದಲಕ್ಷರ ಎಂದು ಯಾರಿಂದಲೋ ನನಗೆ ಆಮೇಲೆ ತಿಳಿಯಿತು. ಹೀಗಿರುವುದರಿಂದ ನನ್ನ ಮತ್ತು ನರಸಿಂಹಮೂರ್ತಿಯವರ ಸ್ನೇಹ ಸಂಬಂದದ ಕೆಲವು ಸವಿನೆನಪುಗಳನ್ನು ಮಾತ್ರ ತಿಳಿಸಬಲ್ಲೆ.

ಕಾಲೇಜು ದಿನಗಳಲ್ಲಿ ನರಸಿಂಹಮೂರ್ತಿ ನನ್ನ ಸಹಪಾಠಿ. ಇಂಟರ್ ಮೀಡಿಯಟ್ ಮತ್ತು ಮುಂದಿನ ಪರೀಕ್ಷೆಗಳಲ್ಲಿ ಮೊದಲ ಐದರಲ್ಲಿ ನಾವಿಬ್ಬರೂ ಇದ್ದೆವು. ಪರಸ್ಪರ ಗೌರವ, ಅಭಿಮಾನಗಳು ಮೂಡಲು ಈ ಅಂಶವೂ ಒಂದು ಕಾರಣ. ಕನ್ನಡದಲ್ಲಿ ನನ್ನದು ವಿಶೇಷ ಒಲವು, ವ್ಯಾಸಂಗ. ಆತನ ಒಲವು, ಆಯ್ಕೆ ಅರ್ಥಶಾಸ್ತ್ರ. ಇಂಗ್ಲೀಷಿನಲ್ಲಿ ಬರವಣಿಗೆ ಮತ್ತು ವಾಗ್ಮಿತೆ – ಆತ ನನಗಿಂತ ಗಟ್ಟಿಗ. ಅರ್ಥಶಾಸ್ತ್ರದಲ್ಲಿ ಆತ ಮೆರೆದ ಸಾಮರ್ಥ್ಯದಿಂದ ವಿ. ಎಲ್. ಡಿ'ಸೋಜ ಅವರಿಗೆ ಅತ್ಯಂತ ಪ್ರಿಯ. ಅರ್ಥಶಾಸ್ತ್ರದಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಪಡೆದಿದ್ದ ಎಸ್. ಎಸ್. ಸುಬ್ಬರಾಯರೂ ನರಸಿಂಹಮೂರ್ತಿಯನ್ನು ಮೆಚ್ಚಿಕೊಂಡಿದ್ದರು. ನಾನೂ ಸುಬ್ಬರಾಯರ ವಿಶೇಷ ಗಮನಕ್ಕೆ ಪಾತ್ರನಾಗಿದ್ದೆ; ಕಾರಣ ಬೇರೆ; ಅದರ ಉಲ್ಲೇಖ ಇಲ್ಲಿ ಅಪ್ರಸಕ್ತ.

ಕಾಲೇಜಿನ ವ್ಯಾಸಂಗ ಮುಗಿದ ಮೇಲೆ, ನನ್ನ ಮತ್ತು ನರಸಿಂಹಮೂರ್ತಿಯವರ 'ಹೂ ಚೆಲ್ಲಿದ ಹಾದಿ' ಕವಲೊಡೆಯಿತು. ಅವರ ಮುಂದೆ ತೆರೆದ ಹೊಸ ಹಾದಿ

ಉನ್ನತಾಧಿಕಾರದಿಂದ ಉನ್ನತೋನ್ನತ ಅಧಿಕಾರ ಪದವಿಗಳಿಗೆ ಒಯ್ದು ಹೊಣೆಗಾರಿಕೆಗಳನ್ನು ಹೆಗಲ ಮೇಲೆ ಹೊರಿಸಿದ ಎಚ್ಚರಿಕೆಯ ಪಯಣದ ಹಾದಿಯಾದರೂ, ಎಂದಿನಂತೆ ಹೂ ಚೆಲ್ಲಿ ತಂಪಾದ ನೆರಳು ನೀಡುತ್ತಿದ್ದ ಹಾದಿಯೇ ಆಗಿತ್ತು, ಹಾಗೆಂದು ನನ್ನ ಎಣಿಕೆ. ನನ್ನ ಕವಲು ಹಾದಿಯಾದರೋ, ನಾನೇ ಹೂ ಚೆಲ್ಲಿಕೊಂಡು, ಅಷ್ಟಾಗಿ ನೆರಳಿಲ್ಲದ ಹಾದಿಯಲ್ಲಿ ನೆರಳಿಗಾಗಿ ಕೊಡೆ ಹಿಡಿದುಕೊಂಡು, ಆಯಾಸ ಪರಿಹಾರಕ್ಕೆ ಅಲ್ಲಲ್ಲೆ ಕುಳಿತು, ಕಲ್ಲು ಮುಳ್ಳು ತುಳಿದುಕೊಂಡು, ಕಷ್ಟಪಟ್ಟುಕೊಂಡು ಸವೆಸಿದ ಹಾದಿ. ನಾನು ಬಲ್ಲಮಟ್ಟಿಗೆ, ಕಾಲೇಜು ದಿನಗಳಂದು ನರಸಿಂಹಮೂರ್ತಿ ಕೂಡ ಕಷ್ಟ–ಕಾರ್ಪಣ್ಯಗಳನ್ನು ಕಂಡ ಕಾಲ. ಈ ಸಂಗತಿಯನ್ನು ಸ್ಪಷ್ಟಪಡಿಸುವ ಸಂಗತಿಯನ್ನು ಮುಂದೆ ತಿಳಿಸುತ್ತೇನೆ. ನಾನು ಹುಟ್ಟಿ ಬೆಳೆದ ಮೈಸೂರಿನಲ್ಲಿ ಬಡ ಗುಮಾಸ್ತರೇ ಆದರೂ ಎರಡು ಹೊತ್ತಿನ ಊಟಕ್ಕೆ ಕಾರ್ಪಣ್ಯ ಪಡದ ನನ್ನ ತಂದೆಯ ಮನೆಯಲ್ಲಿ ಹಿಂದು ಮುಂದಿನ ಪರಿವೆಯಿಲ್ಲದೆ ನೆಮ್ಮದಿಯಾಗಿ ಕಾಲ ಕಳೆಯುತ್ತಿದ್ದೆ ನಾನು. ಒಟ್ಟಿನಲ್ಲಿ, ಕಾಲೇಜು ದಿನಗಳು ನನ್ನ ಪಾಲಿಗೆ ನನ್ನೆಲ್ಲ ಆಪ್ತಮಿತ್ರರ ಸ್ನೇಹದ ಸವಿನೆನಪನ್ನು ಮಾತ್ರ ಉಳಿಸಿ, ಸುಖಸ್ವಪ್ನದಂತೆ ಸರಿದುಹೋಗಿ, ಸುಮಾರು ಎರಡು ದಶಕಗಳ ಮೇಲಾಗಿತ್ತು. ಈ ದೀರ್ಘಕಾಲದಲ್ಲಿ, ನಾನು ನನ್ನ ವೃತ್ತಿ ಜೀವನದಲ್ಲಿ ತೆವಳಿಕೊಂಡು ಸಾಗುತ್ತ, ಸುಮಾರು ಹದಿನೈದು ವರ್ಷಗಳ ಕಾಲ ಐವತ್ತು ರೂಪಾಯಿಗಳ ಸಂಬಳಗಾರನಾಗಿ, ಕಡೆಗೊಮ್ಮೆ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ ಎನ್ನಿಸಿಕೊಂಡಿದ್ದೆ ! ಆ ತರುಣದಲ್ಲಿ ನರಸಿಂಹಮೂರ್ತಿಯವರು M. C. S. ಪರೀಕ್ಷೆ ಮಾಡಿದ್ದರಿಂದ ಕೂಡಲೆ ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕಗೊಂಡರು, ಅನೇಕ ಜಿಲ್ಲೆಗಳಲ್ಲಿ ಡೆಪ್ಯುಟಿ ಕಮಿಷನರ್ ಆಗಿ ಕೆಲಸ ಮಾಡಿ, ಕೊಡಗಿನ ಚೀಫ್ ಕಮಿಷನರ್ ಆಗಿದ್ದವರು ಆರೋಗ್ಯ ಲಾಭಕ್ಕಾಗಿ ಬೆಂಗಳೂರಿಗೆ ವರ್ಗಪಟ್ಟು, ಬಸವನಗುಡಿಯ ನಾರ್ತ್‌ರೋಡಿನಲ್ಲಿ (ಲಾಲ್‌ಬಾಗಿನ ಪಶ್ಚಿಮದ ಹೆಬ್ಬಾಗಿಲಿನಿಂದ ನೇರವಾಗಿ ಬರುವ, ವಿ. ಸೀ. ಕವನಿಸಿರುವ 'ಕೆಂಪುಪೂಸಾಲ್ಮರದ ದಾರಿ') ಪಶ್ಚಿಮದ ಕಡೆ, ಒಂದು ಹಳೆಯ ಮಾದರಿಯ ಬಂಗಲೆಯಲ್ಲಿ ಒಕ್ಕಲಿದ್ದರು. ನಾನು ಸಮೀಪದಲ್ಲೆ, ಗವೀಪುರದ ವಿಸ್ತರಣದಲ್ಲಿ, ಸ್ವಂತದ ಒಂದು ಗೂಡು ಕಟ್ಟಿಕೊಂಡು ವಾಸವಾಗಿದ್ದೆ. ಇಷ್ಟು ಹತ್ತಿರದಲ್ಲಿದ್ದರೂ ಒಬ್ಬರನ್ನೊಬ್ಬರು ನೋಡಹೋಗದೆ ಇದ್ದದ್ದು ಈಗಲೂ ನನಗೆ ಅರ್ಥವಾಗದ ಸಂಗತಿ. ರಾಜ ಬೀದಿಗಳಲ್ಲಿ ಅವರು ಕಾರಿನಲ್ಲಿ, ನಾನು ಕಾಲಮೇಲೆ ಹೋಗುತ್ತಿದ್ದಾಗ, ಇಲ್ಲವೆ ನಾನು ಬಸ್‌ನಿಲ್ದಾಣದಲ್ಲಿ 'ಕ್ಯೂ' ಹಿಡಿದಿದ್ದಾಗ ಆಕಸ್ಮಿಕವಾಗಿ ಸಂಧಿಸಿದಾಗ ಮುಗುಳುನಗೆಯ ವಿನಿಮಯ, ಔಪಚಾರಿಕ ವಂದನೆ ಪ್ರತಿವಂದನೆ, ಇವು ಸಾಗುತ್ತಿದ್ದವು, ನಮ್ಮಿಬ್ಬರ ನಡುವೆ. ಇದನ್ನು ಬಿಗುಮಾನ ಎನ್ನಲಾರೆ, ಹಾಗಿದ್ದರೆ ಸಲಿಗೆ ಮತ್ತೆ ಎಳೆಕೂಡಿಕೊಳ್ಳುತ್ತಿರಲಿಲ್ಲ. ನಗರ ಜೀವನದ ಧಾವಂತದ ಪರಿಣಾಮ ! ಯಾರಿಗೂ ಬಿಡುವಿಲ್ಲ, ಯಾರಿಗೂ ಕೈ ತೆರವಿಲ್ಲ ! ಇದಕ್ಕೆ ಮುನ್ನ ನಮ್ಮಿಬ್ಬರ ನಡುವೆ, ನರಸಿಂಹಮೂರ್ತಿ ಬೇರೆ ಬೇರೆ ಊರುಗಳಲ್ಲಿದ್ದಾಗ ಪತ್ರ ವ್ಯವಹಾರ ಏನೂ ನಡೆದಿರಲಿಲ್ಲ. ಈ ವಿಭಾಗದಲ್ಲಿ ಇಬ್ಬರೂ

ಅಪರಾಧಿಗಳು ಇಲ್ಲವೆ ಇಬ್ಬರೂ ನಿರಪರಾಧಿಗಳು ! 'ಯೋಗಕ್ಷೇಮ' ವಿಚಾರಿಸುವುದಕ್ಕೆ ನಾವು ಬಂಧುಗಳಾಗಿರಲಿಲ್ಲ. ಪತ್ರ ವ್ಯವಹಾರಕ್ಕೆ ಕಾರಣ ಬೇಕಿಲ್ಲ, (ಚಿ. ನ. ಮಂಗಳ ನನಗೆ ಆಗೊಮ್ಮೆ ಈಗೊಮ್ಮೆ ಬರೆಯುವುದುಂಟು, ನಾನೂ ಉತ್ತರಿಸುವುದುಂಟು ಸಂದರ್ಭಗಳು ಒದಗಿ ಬಂದಂತೆ.) ಅಂಥ ಅಗತ್ಯ ಬಿದ್ದಿರಲಿಲ್ಲ. ಅಲ್ಲದೆ, ನನಗೆ ತೋರುತ್ತದೆ, ಪತ್ರ ವ್ಯವಹಾರಕ್ಕೆ ಪ್ರಚೋದನೆ ನೀಡುವಂತಹ common interests ಸಮಾನಾಸಕ್ತಿಗಳು, common ground ಸಮಾನ ಭೂಮಿಕೆ ನಮ್ಮಲ್ಲಿ ಇರಲಿಲ್ಲ ಆ ಕಾಲದಲ್ಲಿ. ಜೊತೆಗೆ, out of sight, out of mind ಕಣ್ಣೆದುರಿಗೆ ಇಲ್ಲದಿದ್ದಾಗ ಒಬ್ಬರು ಇನ್ನೊಬ್ಬರನ್ನು ಸ್ಮರಿಸಿಕೊಳ್ಳುವುದಿಲ್ಲ. ನಲ್ಲ ನಲ್ಲೆಯರ ಮಾತು ಬೇರೆ. ನರಸಿಂಹಮೂರ್ತಿ ಬೆಂಗಳೂರಿಗೆ ಬಂದ ಮೇಲೆ, ಅವರಿದ್ದ ನಿವಾಸ ನನಗೆ ಗೊತ್ತಿದ್ದು ನನ್ನ ಮನೆಗೆ ತೀರ ಸಮೀಪ ಇದ್ದರೂ ಕೂಡ ನಾನು ಅವರನ್ನು ಹೋಗಿ ಕಾಣಬಹುದಾಗಿತ್ತು. ಕಾಣ ಹೋಗಲಿಲ್ಲ. ಕುಚೇಲ ಸ್ಥಾನದಲ್ಲಿದ್ದ ನಾನು ಕೃಷ್ಣನ ಮನೆಗೆ ಹೋಗುವುದು ಹೇಗೆ ? ಬಡವನ ಬಿಗುಮಾನ, ಬಿಂಕ, ಸುತ್ತ ಮನಃಸ್ತರದಲ್ಲಿ ಕೆಲಸ ಮಾಡಿದ್ದಿರಬೇಕು !

ಸೋಜಿಗ ! ಕೃಷ್ಣನೇ ಕುಚೇಲನ ಮನೆಗೆ ಬಂದ ! ಪುರಾಣದ ಸಂಗತಿ ಹಿಂದು ಮುಂದಾಯಿತು. ಅಧಿಕಾರ ಸ್ಥಾನಗಳಲ್ಲಿ, ಪದವಿ ಪ್ರತಿಷ್ಠೆಗಳಲ್ಲಿ, ತಾರತಮ್ಯ ಅಡ್ಡಗೋಡೆ ಕಟ್ಟಿ ನಿಂತಾಗ, ಸ್ನೇಹ ಮೇಲಿನಿಂದ ಕೆಳಕ್ಕೆ ಇಳಿಯಬೇಕೇ ಹೊರತು ಕೆಳಗಿನಿಂದ ಮೇಲಕ್ಕೆ ಏರುವುದು ಹೇಗೆ ಸಾಧ್ಯ ? (ಪುರಾಣ ಕಥೆಯಲ್ಲೂ, ಕುಚೇಲ ಕೃಷ್ಣನ ಅರಮನೆಗೆ ಹೋದಾಗ, ಬಾಲ್ಯ ಸ್ನೇಹಿತನನ್ನು ಕಂಡು ಕೃಷ್ಣ ಪೀಠದಿಂದ ಇಳಿದು ಬಂದು ಕುಚೇಲನಿಗೆ ಹಸ್ತಲಾಘವ ಕೊಟ್ಟು ಕರೆದೊಯ್ದನಲ್ಲವೆ ?) Law of gravitational force in social relations. ಇದು 'ಸ್ನೇಹ' ಧರ್ಮ. ನಾನು ಅವರ ಮನೆಗೆ ಹೋಗಬಹುದಾಗಿತ್ತು; ಕೆಲಸ ಕಾರ್ಯ ಇಲ್ಲದಿದ್ದರೂ, ಸ್ನೇಹದ ಸೌಲಭ್ಯಕ್ಕಾಗಿ,. ಉನ್ನತಾಧಿಕಾರಿಯ ಸಹಪಾಠಿ ಮಿತ್ರನಾದ ಸಾಮಾನ್ಯ ಅಧ್ಯಾಪಕನೊಬ್ಬ – ಅದರಲ್ಲೂ ಪಂಚೆ ಧರಿಸುವ ಕನ್ನಡ ಅಧ್ಯಾಪಕ – ಹಾಗೆ ಕಾಣ ಹೋದರೆ, ತನ್ನಿಂದ ಏನೋ ಉಪಕಾರ ಬಯಸಿ ಬಂದಿದ್ದಾನೆ ಈತ ಎಂದು ಉನ್ನತಾಧಿಕಾರಿ ಭಾವಿಸಿಕೊಂಡು, ಹುಬ್ಬೇರಿಸಿ ಬರಮಾಡಿಕೊಳ್ಳಬಹುದಲ್ಲವೆ? ಸಲ್ಲದ ಬಿಂಕದ ಜೊತೆಗೆ ಇಲ್ಲದ – ಅಥವಾ ಇರಕೂಡದ – ಅಳುಕು !

ಒಂದು ದಿನ ಬೆಳಗ್ಗೆ ನನ್ನ ಮೂರಂಕಣದ (ಸ್ವಂತ) ಔಟ್‌ಹೌಸಿನ, ಕಾಡುಗಿಡಗಳು ಬೆಳೆದಿದ್ದ ಮುಂಬಯಲಿನ ಮುಂದೆ, ಬೀದಿಯಲ್ಲಿ ಒಂದು ಕಾರು ಬಂದು ನಿಂತಿತು. ಸುಮಾರು 15 - 16 ವಯಸ್ಸಿನ ಹುಡುಗಿಯ (ಮಗಳಿರಬಹುದು ಎಂದು ಕೊಂಡೆ ಆಗ) ಜೊತೆ ನರಸಿಂಹಮೂರ್ತಿ ಮನೆಯ ಮುಂದಿನ ತೆರಪು ವರಾಂಡದಲ್ಲಿ ಬಂದು ನಿಂತರು; "ಏನು ಮಗೂ, ಹೇಗಿದ್ದೀಯಾ?" ಎಂಬ ಪ್ರಶ್ನೆ ಹೆಣ್ಣುಮಗಳ ಕೆಂದುಟಿಯನ್ನೂ ನಾಚಿಸಿ ಕೆಂಪೇರುವಂತೆ ಮಾಡುವಂತಹ ಕುಡಿ ಬಾಚಿದ ಕೆಂದುಟಿ ಮುಕ್ಕಳಿಸಿದ ನಿರ್ಮಲ ಸ್ನಿಗ್ಧ

ಮಂದಹಾಸದಲ್ಲಿ ತೇಲಿ ಬಂದು ಕಾಲೇಜು ದಿನಗಳ ನೆನಪುಗಳನ್ನು ಸುರಳಿ ಬಿಚ್ಚಿಸಿದ ಸಲಿಗೆಯ ಪ್ರಶ್ನೆ, ನನ್ನ ಚಳಿ ಬಿಡಿಸಿತು. ನನ್ನ ಬಿಂಕ, ಅಳುಕು ಎಲ್ಲ ಮಾಯವಾದವು. (ನರಸಿಂಹಮೂರ್ತಿ ನನ್ನನ್ನು 'ಮಗೂ' ಎಂದು ಕರೆದದ್ದಕ್ಕೆ ಹಿನ್ನೆಲೆಯ ಸಂದರ್ಭ ಇದೆ. ಕೈಲಾಸಂ ಅವರ 'ಪೋಲಿ ಕಿಟ್ಟಿ' ನಾಟಕದಲ್ಲಿ ನಾನು 'ಮಗು' ಪಾತ್ರವನ್ನು ವಹಿಸಿದ್ದು, ಆಪ್ತ ಮಿತ್ರರಿಗೆಲ್ಲರಿಗೂ ನಾನು 'ಮಗು' ಆಗಿ ಪರಿಣಮಿಸಿದ್ದೆ. ಈಗಲೂ.)

"ಏನು ಬಂದೆಯಲ್ಲಾ, ಹಳೆಯ ಸ್ನೇಹಿತನ ನೆನಪಾಯಿತೋ, ಇಲ್ಲ ..." ಸ್ವಾಗತ ಬಯಸಿದ ನನ್ನ ಮರುಪ್ರಶ್ನೆ. "ನಿನ್ನಿಂದ ಒಂದು ಉಪಕಾರವಾಗಬೇಕಲ್ಲ ?" "ನನ್ನಿಂದ ನಿನಗೆ ಉಪಕಾರವೆ ?" "ಖಂಡಿತವಾಗಿ, ಯಾಕಾಗಬಾರದು ? ನಿನ್ನಿಂದ ಆಗುತ್ತೆ ಅನ್ನೋ ನಂಬಿಕೆಯಿಂದಲೇ ನಿನ್ನ ಮನೆ ಹುಡುಕಿಕೊಂಡು ಬಂದೆ. ಇವಳು ..." (ನಿನ್ನ ಮಗಳೋ ಎಂದು ನಾನು ಕೇಳುವಷ್ಟರಲ್ಲಿಯೆ) " ... ನನ್ನ ಮಗಳು, ಮಂಗಳಾ ('ನಮಸ್ಕಾರ ಸರ್'), ಲಿಟರೇಚರ್ ಆನರ್ಸ್‌ನಲ್ಲಿ ಓದುತ್ತಾ ಇದಾಳೆ. Historical Novel, ಕನ್ನಡದಲ್ಲಿ ಅದರ ಬೆಳವಣಿಗೆ, ಈ ವಿಷಯವಾಗಿ ಒಂದು ಪ್ರಬಂಧ ಬರೀಬೇಕಂತೆ. ನೀನು ಸ್ವಲ್ಪ ಅವಳಿಗೆ ಸಹಾಯ ಮಾಡಬೇಕಲ್ಲ ?" "ರಾಜರತ್ನಂ ಇದಾರಲ್ಲ, ಅವರಿಗಿಂತ ನಾನೇ ?" "ರಾಜರತ್ನಂನ ನಾನು ಕಾಣೆನೇ ? ನಿನ್ನನ್ನೇ ಕೇಳಬೇಕು ಅನ್ನಿಸಿತು. ಬಂದೆ."

ಈ ವೇಳೆಗೆ ನನ್ನವು ಎರಡು ಮೂರು ಕಾದಂಬರಿಗಳು ಪ್ರಕಟವಾಗಿದ್ದು, ಈ ಅಂಶ ಅವರನ್ನು ನನ್ನ ಕಡೆಗೆ ಬರಮಾಡಿರಬೇಕು ಎಂದುಕೊಂಡೆ.

ಗೆಳೆಯ ನನಗೆ ಗೌರವ ತೋರಿಸಿದ್ದ. ಐತಿಹಾಸಿಕ ಕಾದಂಬರಿಯ ಸ್ವರೂಪ, ಕನ್ನಡದಲ್ಲಿ ಆ ಕ್ಷೇತ್ರದಲ್ಲಿ ಆಗಿದ್ದ ಅಲ್ಪಸ್ವಲ್ಪ ಕೆಲಸ, ಎ. ಆರ್. ಕೃ. ಅವರು 'ಕನ್ನಡ ಐತಿಹಾಸಿಕ ಕಾದಂಬರಿಗಳು' ಎಂಬ ವಿಷಯವಾಗಿ ಪ್ರಬುದ್ಧ ಕರ್ಣಾಟಕದಲ್ಲಿ ಬರೆದಿದ್ದ ಲೇಖನ, ಹಡ್ಸನ್‌ರವರ An Introduction to the Study of Literature, ಇವುಗಳನ್ನು ಪ್ರಸ್ತಾಪಿಸಿ, ಕೆಲವು ಸಲಹೆ ಸೂಚನೆಗಳನ್ನು ಕೊಟ್ಟು, ಪ್ರಬಂಧ ಬರೆಯುವಂತೆ ಹೇಳಿದೆ. ಕುಮಾರಿ ಮಂಗಳ ಪ್ರಬಂಧವನ್ನು ಬರೆದು ತಂದು ತೋರಿಸಿದಳು. ನನಗೆ ತೋರಿದಂತೆ ಅದನ್ನು ಅಲ್ಲಿ ಇಲ್ಲಿ ಕೈಯಾಡಿಸಿಕೊಟ್ಟೆ. ಅವಳಿಗೆ ಆಗ ನನ್ನ ಶಿಕ್ಷಣ ಇಷ್ಟೆ. ರಾಜರತ್ನಂ, ವಿ. ಸಿ., ಇಂಥ ಗುರು ಶ್ರೇಷ್ಠರಿಂದ ಸ್ಫೂರ್ತಿದಾಯಕ ಶಿಕ್ಷಣವನ್ನು ಪಡೆದ, ದೈವದತ್ತವಾದ ಬರಹದ ಶಕ್ತಿಯುಳ್ಳ ಯಾರು ತಾನೇ ಬರಹಗಾರರಾಗಿ ಬೆಳೆದು ಹೆಸರು ಮಾಡಿಲ್ಲ ? ಮಂಗಳ ಈಚಿನ ಕೆಲವು ವರ್ಷಗಳಲ್ಲಿ 'ಹೆಲೆನ್ ಕೆಲರ್' ಮುಂತಾದ ಕೆಲವು ಬಹಳ ಒಳ್ಳೆಯ ಪುಸ್ತಕಗಳನ್ನು ಬರೆದಿದ್ದಾರೆ; ಗಣ್ಯ ಲೇಖಕಿ ಎನ್ನಿಸಿಕೊಂಡಿದ್ದಾರೆ. ಇವರ ತಾಯಿ ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿ ಒಳ್ಳೆಯ ಕಥೆಗಳನ್ನುಳ್ಳ ಸಂಕಲನಗಳನ್ನು ಪ್ರಕಟಿಸಿದ್ದಾರೆ. ತಂದೆ ತಾಯಿಗಳ ಬರಹದ ಶಕ್ತಿ ಈ ಮಗಳಲ್ಲಿ ಇಳಿದು ಬಂದಿರುವುದು ಸಹಜವಾಗಿಯೆ ಇದೆ. ಜೊತೆಗೆ, ತಂದೆಯ ದೊಡ್ಡ ಗುಣಗಳೆಲ್ಲ – ಸ್ನೇಹಪರತೆ, ಹೃದಯ ವೈಶಾಲ್ಯ, ಬೌದ್ಧಿಕವಾಗಿ ಸಾಮಾಜಿಕವಾಗಿ ಅಶಕ್ತರಾದವರಲ್ಲಿ ಅನುಕಂಪ, ಸಮಾಜ ಸುಧಾರಣಾ ಪ್ರವೃತ್ತಿ ಇವೆಲ್ಲ ಈಕೆಯಲ್ಲಿ

ಮೂರ್ತಿಮತ್ತಾಗಿವೆ. ನನ್ನಲ್ಲಿ ಈಕೆ ತೋರುತ್ತಿರುವುದು ತಂದೆಯ ಮಿತ್ರ ಎಂಬ ನಿಮಿತ್ತವಾದ ಗೌರವ ಮಾತ್ರವಲ್ಲ. ಎರಡು ಅಕ್ಷರ ಕಲಿಸಿದಾತನೂ ಗುರು ಎಂಬ ನಮ್ಮ ನಾಡಿನ ಆತ್ಮೀಯವಾದ ಮಾತಿಗೆ ಅರ್ಥ ತುಂಬಿ ಈಕೆ ನನ್ನಲ್ಲಿ ಇಟ್ಟಿರುವ ಗುರುಭಕ್ತಿ. ಇದು ನನ್ನ ಪುಣ್ಯ.

ಅಂತೂ ತಮ್ಮ ಮಗಳನ್ನು ನನ್ನ ಮನೆಗೆ ಕರೆದುಕೊಂಡು ಬಂದು ಪರಿಚಯ ಮಾಡಿಸಿಕೊಡುವ ಸಂದರ್ಭದಲ್ಲಿ ನರಸಿಂಹಮೂರ್ತಿ ನನ್ನ ಮನೆಗೆ ಒಂದೆರಡು ಸಲ ಬರುವಂತಾಯಿತು. ಅವರಿಗೆ, ಅವರ ಮಗಳು ಮಂಗಳಾಗೆ, ನಾನು ಮಾಡಿದ್ದು – ಒಂದು ಸಣ್ಣ ಉಪಕಾರ ಎನ್ನಬಹುದಾದರೆ – ನಿಜವಾಗಿ ಉಪಕಾರವಲ್ಲ; ಪ್ರತ್ಯುಪಕಾರ. ಹೇಗೆ ಎನ್ನುವುದನ್ನು ವಿವರಿಸುತ್ತೇನೆ.

ನಾನು ಬಿ. ಎ. ತರಗತಿಯಲ್ಲಿ ವಿದ್ಯಾರ್ಥಿಯಾಗಿದ್ದಾಗ (1930) ನರಸಿಂಹಮೂರ್ತಿ ಬಿ. ಎ. ಆನರ್ಸ್ (ಅರ್ಥಶಾಸ್ತ್ರ ಮುಖ್ಯ ವ್ಯಾಸಂಗ ವಿಷಯ) ವಿದ್ಯಾರ್ಥಿ. ಇಂಗ್ಲೀಷ್ ಮತ್ತು ದ್ವಿತೀಯ ಭಾಷೆ ಕನ್ನಡ ತರಗತಿಗಳಿಗೆ ಮಾತ್ರ ಒಟ್ಟಿಗೆ ಕಲೆಯುತ್ತಿದ್ದೆವು. ಆಗ ಎರಡು ವರ್ಷ ಕಾಲ ಮೂರ್ತಿ ವಿಶ್ವವಿದ್ಯಾನಿಲಯದ ಯೂನಿಯನ್ನಿನ ವಿದ್ಯಾರ್ಥಿ ಕಾರ್ಯದರ್ಶಿ. ಯೂನಿಯನ್ನಿನ ಕನ್ನಡ, ಇಂಗ್ಲಿಷ್ ಎಲೊಕ್ಯೂಷನ್ (ವಾಚಕಾಭಿನಯ) ಸ್ಪರ್ಧೆಗಳು, ವಾದ್ಯಗೋಷ್ಠಿ, ಕನ್ನಡ ಮತ್ತು ಇಂಗ್ಲೀಷ್ ಚರ್ಚಾ ಕೂಟಗಳು, ನಾಟಕಾಭಿನಯ, ವಿದ್ಯಾರ್ಥಿಗಳ ಚಿತ್ರಕಲಾ ಪ್ರದರ್ಶನ – ಇವುಗಳಲ್ಲೆಲ್ಲ ನಾನು ಭಾಗವಹಿಸುತ್ತಿದ್ದೆ. ಕೆಲವಲ್ಲಿ ಬಹುಮಾನವನ್ನೂ ಪಡೆದೆ. ಈ ಸಂದರ್ಭಗಳಲ್ಲಿ ನರಸಿಂಹಮೂರ್ತಿಯ ಪ್ರೋತ್ಸಾಹ, ಮೆಚ್ಚಿಗೆ, ನನ್ನ ಪಾಲಿಗಿದ್ದವು. ಸಹಜವಾಗಿಯೆ ನನ್ನ ನರಸಿಂಹಮೂರ್ತಿಯ ಸ್ನೇಹ, ಸಲಿಗೆ ಬೆಳೆಯಲು ಅವು ಕಾರಣವಾದವು. ನನ್ನ ಸುಪ್ತ ಕಲಾಶಕ್ತಿಗಳನ್ನು ಗುರುತಿಸಿ ಮೆಚ್ಚಿಕೊಂಡು, ಬೆನ್ನು ತಟ್ಟುತ್ತಿದ್ದವರಲ್ಲಿ ಈತನೂ ಒಬ್ಬ. ಯೂನಿಯನ್ ಪತ್ರಿಕೆಗೆ ನರಸಿಂಹಮೂರ್ತಿ ವಿದ್ಯಾರ್ಥಿಗಳ ಪರವಾಗಿ ಸಂಪಾದಕ; ನಾನು ಸಂಪಾದಕ ಮಂಡಲಿಯ ಸದಸ್ಯರಲ್ಲಿ ಒಬ್ಬ. ನನ್ನ ಚೊಚ್ಚಲು ಬರಹಗಳಲ್ಲಿ ಕೆಲವನ್ನು ('ಮುಗಿಲುಗಳು' ಎಂಬ ಲಲಿತ ಪ್ರಬಂಧ, 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಎಂಬ ಪದ್ಯ ಮುಂತಾದವು) 'ರಾಘವ' ಎಂಬ ಕಾವ್ಯನಾಮದಲ್ಲಿ ಪ್ರಕಟಣೆಗೆ ಕೊಟ್ಟಿದ್ದೆ. ನನ್ನ ನಿಜನಾಮವನ್ನೂ ತರಗತಿಯನ್ನೂ ಕಾಣಿಸಿರಲಿಲ್ಲ. ಎ. ಎನ್. ಮೂರ್ತಿರಾಯರು ಸಂಪಾದಕ ಮಂಡಲಿಯ ಅಧ್ಯಕ್ಷರು ಎಂದು ನೆನಪು. ನರಸಿಂಹಮೂರ್ತಿ ನನ್ನ ಬರಹಗಳನ್ನು ಪ್ರಕಟನಾರ್ಹ ಎಂದು ಆಯ್ದಿದ್ದು ಸಂಪಾದಕ ಮಂಡಲಿಯ ಸಭೆಯಲ್ಲಿ, ನನ್ನ ಕಡೆ ತುಂಬು ನಗೆ ಬೀರುತ್ತ – "ಬರಹಗಳೇನೋ ಚೆನ್ನಾಗಿವೆ. ಆದರೆ ಬರೆದವರು ಯಾರು ಎನ್ನುವುದನ್ನು ತಿಳಿಸಿಲ್ಲ. ಹಾಕೋಣವೋ ಬೇಡವೋ ?" ಎಂದು ಅಧ್ಯಕ್ಷರ ಮುಖ ನೋಡಿದ. ಅವರು "ಕರ್ಣಾಟಕ ಸಂಘ ನಡೆಸಿದ ವಿದ್ಯಾರ್ಥಿ ಕವಿ ಸಮ್ಮೇಳನದಲ್ಲಿ ಓದಿದ ಪದ್ಯ ಅಲ್ಲವೆ,

ಇದು'' ಎಂದು ಅರ್ಥಪೂರ್ಣವಾಗಿ ನನ್ನ ಕಡೆ ನೋಡಿದರು. (ಹೀಗೆಂದು ನನ್ನ ನೆನಪು.) ನಾನು ಸಿಕ್ಕಿಬಿದ್ದೆ. ಬರಹಗಳು ನನ್ನವು ಎಂದು ದೃಢಪಟ್ಟು, ಅನುಕ್ರಮವಾಗಿ ಯೂನಿಯನ್ ಪತ್ರಿಕೆಯಲ್ಲಿ ಪ್ರಕಟವಾದವು. ಪದ್ಯ, ಮುಂದೆ ಕರ್ಣಾಟಕ ಸಂಘ ಪ್ರಕಟಿಸಿದ 'ತಳಿರು' ಕವನ ಸಂಕಲನದಲ್ಲಿ ಸೇರ್ಪಡೆಯಾಗಿ, ತರುಣ ಕವಿಗಳ ಸಾಲಿನಲ್ಲಿ ಎಡೆ ದೊರೆಯಿತು. ವಿದ್ಯಾರ್ಥಿ ದಶೆಯಲ್ಲಿ ಬರೆದು, ವಿದ್ಯಾರ್ಥಿಗಳ ಪತ್ರಿಕೆಯಲ್ಲಿ ಪ್ರಕಟವಾದ 'ಮುಗಿಲುಗಳು' ಎಂಬ ಪ್ರಬಂಧ ನನ್ನ ಪಾಲಿನ ರೂಪಾಯಿ ಗಿಡವಾಗಿ ಪರಿಣಮಿಸಿ, ಇಂದಿಗೂ ರಾಯಲ್ಟಿಯನ್ನು ತಂದು ಕೊಡುತ್ತ, ನನಗೆ ಸಾವಿರಾರು ರೂಪಾಯಿಗಳನ್ನು ಸಂಪಾದಿಸಿ ಕೊಟ್ಟಿದೆ. ಅದು ಈಚೆಗೆ ಇಂಗ್ಲೀಷಿಗೂ ಭಾಷಾಂತರವಾಗಿದೆ. ಬರಹಗಾರನಿಗೆ ವಯಸ್ಸಾಗುತ್ತದೆ; ಬರಹಕ್ಕೆ ವಯಸ್ಸಿನ ಲೆಕ್ಕ ಇಲ್ಲ. ಇದು ಹಾಗಿರಲಿ. ಅಂತೂ, ನನ್ನನ್ನು ಒಬ್ಬ ಲೇಖಕ ಎಂದು ಮೊದಲಿಗೆ ಬೆಳಕಿಗೆ ತಂದ ಶ್ರೇಯಸ್ಸು ಮೂರ್ತಿದ್ವಯರಿಗೆ ಸಲ್ಲುತ್ತದೆ. (ಪ್ರೊ॥ ಮೂರ್ತಿರಾಯರ ಪೂರ್ತಿಯಾದ ಹೆಸರು ನರಸಿಂಹಮೂರ್ತಿ.)

ನಮ್ಮ ಕಾಲೇಜು ದಿನಗಳಲ್ಲಿ ನಡೆಯುತ್ತಿದ್ದ ಪ್ರಮುಖ ಪಠ್ಯೇತರ ಕಾರ್ಯಕಲಾಪಗಳು ಇವು : ಕರ್ನಾಟಕ ಸಂಘದ ಕಾರ್ಯಕಲಾಪಗಳು, ಇಂಗ್ಲಿಷ್ ಮತ್ತು ಕನ್ನಡ ಚರ್ಚಾಕೂಟಗಳು, ಕನ್ನಡ ಇಂಗ್ಲಿಷ್ ನಾಟಕಗಳ ಪ್ರದರ್ಶನ, ಕ್ರಿಕೆಟ್, ಟೆನಿಸ್, ಫುಟ್‌ಬಾಲ್ ಮುಂತಾದ ಕ್ರೀಡೆಗಳು ಇತ್ಯಾದಿ. ನಾನು ಕ್ರೀಡೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. ನರಸಿಂಹಮೂರ್ತಿ ಒಮ್ಮೊಮ್ಮೆ ಟೆನಿಸ್ ಆಟದಲ್ಲಿ ಭಾಗವಹಿಸುತ್ತಿದ್ದುದನ್ನು ಕಾಣುತ್ತಿದ್ದೆ. ಟೆನಿಸ್ ಶ್ರೀಮಂತ ಪುತ್ರರ ಆಟ ಎಂದು ನನ್ನ ಭಾವನೆಯಾಗಿತ್ತು. ನಮ್ಮಿಬ್ಬರಿಗೂ ಸಮಾನ ಮಿತ್ರರಾಗಿದ್ದ ಕೆ. ಆರ್ ಪೂರ್ಣ (ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡ. ಪಾಪ; ಮಹಾರಾಜರ ಕೌನ್ಸಿಲರ್ ಆಗಿದ್ದ ಪಿ. ರಾಘವೇಂದ್ರರಾಯರ ಮೊಮ್ಮಗ) ಎಂ. ಎಸ್. ಸ್ವಾಮಿನಾಥನ್, ವಿ. ಕೆ. ಶ್ರೀನಿವಾಸನ್, ಶ್ರೀ ಸತ್ಯನ್, ಇವರು ನರಸಿಂಹಮೂರ್ತಿಯನ್ನು ಟೆನಿಸಿಗೆ ಸೆಳೆದಿದ್ದರೆಂದು ನನ್ನ ಈಗಿನ ಊಹೆ. ಮೂರ್ತಿ ಸಂಗೀತ ನಾಟಕಗಳಿಂದ ದೂರವಿದ್ದರೂ, ಅವುಗಳ ಚಾಲಕ ಶಕ್ತಿಗಳಲ್ಲಿ ಒಬ್ಬ ಪ್ರಮುಖ. ಸಂಗೀತ ವಾದ್ಯಗೋಷ್ಠಿಯ ಹಾಗೂ ನಾಟಕಗಳ ಅಭ್ಯಾಸ ನಡೆಯುತ್ತಿದ್ದಾಗ ಹಾಜರಿರುತ್ತಿದ್ದ. ರಾಮಯ್ಯರ್ ಹೋಟಲಿನಿಂದ ಜಾಮೂನ್, ದಮ್‌ರೋಟ್, ಜಾಂಗಿರ್, ಮಸಾಲೆದೋಸೆ – ಇವುಗಳನ್ನು ಪುಷ್ಕಳವಾಗಿ ತಿನ್ನಿಸುತ್ತಿದ್ದ. ಆತ ಹಾಜರಿಲ್ಲದ ದಿನ ತಿಂಡಿ ಬರುವುದು ತಡವಾಗುತ್ತಿತ್ತು; ಇಲ್ಲವಾಗುತ್ತಿದ್ದುದೂ ಉಂಟು !

ವಿದ್ಯಾರ್ಥಿ ಲೋಕದಲ್ಲೂ ಅಧ್ಯಾಪಕವೃಂದದಲ್ಲೂ ನರಸಿಂಹಮೂರ್ತಿ ಹೆಸರಾಗಿದ್ದುದು ಆತನ ವಾಗ್ಮಿತೆಯಿಂದ. ಇಂಗ್ಲಿಷ್, ಕನ್ನಡ – ಎರಡರಲ್ಲೂ ಮೋಹಕಶೈಲಿಯ ಅಸ್ಖಲಿತ ಪ್ರಾಸಾರಿಕವಾಣಿ ಆತನದು. ಹಾಸ್ಯ, ವಿಡಂಬನೆ, ಕುಚೋದ್ಯ

ಇವುಗಳಿಂದ ಸಭಿಕರನ್ನು ಆಕರ್ಷಿಸುವುದು ಸುಲಭ. ಅಂದರೆ ಅದು ಕಡಿಮೆ ದರ್ಜೆಯ ಗುಣಗಳು ಎಂದು ನನ್ನ ಅಭಿಪ್ರಾಯವಲ್ಲ. ಶ್ರೀಮದ್ಗಾಂಭೀರ್ಯವಲ್ಲದ ಗಂಭೀರಶೈಲಿ ನರಸಿಂಹಮೂರ್ತಿಯದು. ಇಷ್ಟರ ಜೊತೆಗೆ, ಮನಮೋಹಕವಾದ ಸ್ಫುರದ್ರೂಪ. ಸೂಟು ಧರಿಸುತ್ತಿರಲಿಲ್ಲ. ನಾನು ಧರಿಸುತ್ತಿದ್ದಂತೆ ವೇಷ್ಟಿ ಪಂಚೆ; ಖಾದಿ ಬಟ್ಟೆಯ ಷರಟು, ಕೋಟು. ತುಸು ಕೆಂಪು ಛಾಯೆಯ ಗುಂಗುರು ಕೂದಲ ಕ್ರಾಪು ಕೆಂಗಾಂತಿಯ ಬಿಳಿಬಣ್ಣದ ಅಂದವಾದ ಮಾಟದ ಮುಖಕ್ಕೆ ವಿಲಕ್ಷಣವಾಗಿ ಒಪ್ಪುತ್ತಿತ್ತು. ಈತ ಸೂಟು ಧರಿಸಿ, ಇಂಗ್ಲಿಷ್ ಪ್ರೊಫೆಸರುಗಳಾಗಿದ್ದ, ಜೆ. ಸಿ. ರಾಲೋ, ಎ. ಬಿ. ಮ್ಯಾಕಿಂಟಾಷ್ ಇವರ ಜೊತೆ ಓಡಾಡುತ್ತಿದ್ದರೆ ಅಪರಿಚಿತರಿಗೆ ಒಬ್ಬ ಇಂಗ್ಲಿಷರವನಂತೆಯೇ ಕಾಣುತ್ತಿದ್ದ.

ಆರ್ಥಿಕ ಸ್ಥಿತಿಯಲ್ಲಿ ನರಸಿಂಹಮೂರ್ತಿ ನನ್ನ ಗೋತ್ರಕ್ಕೆ ಸೇರಿದಾತ ಎಂಬ ಸಂಗತಿ ನನಗೆ ತಿಳಿದಿರಲಿಲ್ಲ. ಅದು ತಿಳಿದು ಬಂದ ಸಂದರ್ಭ ಹೀಗೆ. ನಾನಿದ್ದ ಅಗ್ರಹಾರದ ಬೀದಿಯಿಂದ ಕಾಲೇಜಿಗೆ ಹೋಗುವ ದಾರಿಯಲ್ಲಿ ಲಕ್ಷ್ಮೀಪುರದಲ್ಲಿ, ಪಿ. ರಾಘವೇಂದ್ರ ರಾಯರ ಮನೆ. ಒಂದೊಂದು ದಿನ "ನಾಳೆ ನಮ್ಮ ಮನೆಗೆ ಬಂದು ಬಿಡು. ಊಟ ಮಾಡಿಕೊಂಡು ಒಟ್ಟಿಗೆ ಕಾಲೇಜಿಗೆ ಹೋಗೋಣ" ಎಂದು ಪೂರ್ಣ ನನಗೆ ಆಹ್ವಾನ ನೀಡುತ್ತಿದ್ದ. ತನ್ನ ಕಾರಿನಲ್ಲಿ ಕಾಲೇಜಿಗೆ ಕರೆದುಕೊಂಡು ಹೋಗುತ್ತಿದ್ದ. ಹಾಗೆ ಒಂದು ದಿನ ಅವನ ಜೊತೆ ಕಾರಿನಲ್ಲಿ ಹೊರಟಾಗ, ಸುಬ್ಬರಾಯನ ಕೆರೆಯ ಬಳಿ ಇದ್ದ ಅನಾಥಾಲಯದ ಮುಂದೆ ಕಾರು ನಿಂತಿತು. ನನಗೆ ಆಶ್ಚರ್ಯ. "ಸಿಮ್ ಬರಬಹುದು, ಅವನನ್ನೂ ಕರೆದುಕೊಂಡು ಹೋಗೋಣ" ಎಂದು ಪೂರ್ಣ ಕಾರಿನಿಂದ ಇಳಿದ. ಆಗ ಮೊತ್ತ ಮೊದಲಿಗೆ ನನಗೆ ತಿಳಿಯಿತು ನರಸಿಂಹಮೂರ್ತಿ ಅನಾಥಾಲಯದಲ್ಲಿ ಅಶನಾರ್ಥಿ ಅತಿಥಿ ಎಂದು. ಏನೇನೋ ಆಲೋಚನೆಗಳು ತಲೆಯಲ್ಲಿ ಸುಳಿದವು. ಅವನಿಗಿಂತ ನಾನೇ ಮೇಲು ಎಂದುಕೊಂಡೆ; ನಿಟ್ಟುಸಿರುಬಿಟ್ಟೆ. ಪೂರ್ಣ, ನಾನು ಇಬ್ಬರೂ ಅನಾಥಾಲಯವನ್ನು ಪ್ರವೇಶಿಸಿದೆವು. ಪೂರ್ಣನ ಜೊತೆ ಮೂರ್ತಿಯ ಕೊಠಡಿಯನ್ನು ತಲಪಿದ್ದಾಯಿತು. ನರಸಿಂಹಮೂರ್ತಿ ತೆಳ್ಳನೆಯ ಮಸ್ಲಿನ್ ಬಟ್ಟೆಯ ಬನಿಯನ್ ಮತ್ತು ಡ್ರಾಯರ್ ಧರಿಸಿ, ಬಿಚ್ಚಿದ್ದ ಹಾಸಿಗೆಯ ಮೇಲೆ ಪುಸ್ತಕಗಳನ್ನೂ ಕಾಗದದ ಹಾಳೆಗಳನ್ನೂ ಹರಡಿಕೊಂಡು, ವ್ಯಾಸಂಗದಲ್ಲಿ ಮಗ್ನನಾಗಿದ್ದ. ಗೋಡೆಗಳ ಮೊಳೆಗಳಿಗೆ ಬಿಗಿದು ಕಟ್ಟಿದ್ದ ಸೊಳ್ಳೆಯ ಪರದೆಯನ್ನು ಮೇಲಕ್ಕೆ ಮುದುರಿ ತೂಗು ಬಿಟ್ಟಿತ್ತು. "ಸಿಮ್, hurry up" ಎಂದು ಪೂರ್ಣ ಅವನನ್ನು ತ್ವರೆಪಡಿಸಿದ. (ಸಿಮ್, ಮೂರ್ತಿಗೆ ಗೆಳೆಯರು ಇಟ್ಟಿದ್ದ ಸಂಕ್ಷಿಪ್ತನಾಮ, ಅಡ್ಡ ಹೆಸರು.) "ಇವತ್ತು ನಾನು ಬರೊಲ್ಲ, ನೀವು ಹೊರಡಿ" ಎಂದು ನಮ್ಮನ್ನು ಬೀಳ್ಕೊಟ್ಟ ಮೂರ್ತಿ.

ಅಂದಿನ ದಿನದವರೆಗೂ ನರಸಿಂಹಮೂರ್ತಿ ಬಡತನದ ದವಡೆಗೆ ಸಿಕ್ಕಿದ್ದ ವಿದ್ಯಾರ್ಥಿ ಎಂದು ನನಗೆ ತಿಳಿದಿರಲಿಲ್ಲ. ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ, ನರಸಿಂಹಮೂರ್ತಿ self-made man ಸ್ವಸಾಮರ್ಥ್ಯದಿಂದ ಉನ್ನತ ಪದವಿಗೆ ಏರಿದ ವ್ಯಕ್ತಿ ಎನ್ನುವುದು ಅರಿವಿಗೆ ಬರುತ್ತದೆ.

ಮೂರ್ತಿಗೂ ನನಗೂ free student-ship ಇದ್ದೇ ಇತ್ತು. ರಾಷ್ಟ್ರಾಭಿಮಾನಿಯಾಗಿದ್ದ, ಮೈಸೂರಿನ ತಾತಯ್ಯ, grand old man ಎಂದು ಖ್ಯಾತರಾಗಿದ್ದ, ದಿ॥ ಎಂ. ವೆಂಕಟಕೃಷ್ಣಯ್ಯನವರು ಸ್ಥಾಪಿಸಿದ್ದ ಅನಾಥಾಲಯದ ವಿದ್ಯಾರ್ಥಿಯಾಗಿದ್ದುದರಿಂದ ಸಹಜವಾಗಿಯೇ ಅವರ ಉನ್ನತ ಆದರ್ಶಗಳಿಂದ ಮೂರ್ತಿ ಪ್ರಭಾವಿತನಾಗಿದ್ದ; ಎಂ.ಸಿ.ಎಸ್. ಪರೀಕ್ಷೆ ಮಾಡದೆ ಇದ್ದಿದ್ದರೆ, ಮೂರ್ತಿ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕುತ್ತಿದ್ದ ಎಂದು ನನಗೆ ಅನ್ನಿಸುತ್ತದೆ.

ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ನರಸಿಂಹಮೂರ್ತಿ ಒಳ್ಳೆಯ ವಾಗ್ಮಿಯಾಗಿದ್ದುದರ ಜೊತೆಗೆ, ಒಳ್ಳೆಯ ಬರಹಗಾರನೂ ಆಗಿದ್ದ. ನನ್ನ ಬರಹಗಳ ಒಂದಿಗೆಯೇ ಅವನ ಬರಹಗಳೂ ಯೂನಿಯನ್ ಪತ್ರಿಕೆಯಲ್ಲಿ ಮೊತ್ತ ಮೊದಲಿಗೆ ಬೆಳಕು ಕಂಡವು. ಆಗ ಮೂರ್ತಿ ಪಿ. ಆರ್. ರಾಮಯ್ಯನವರು ನಡೆಸುತ್ತಿದ್ದ 'ತಾಯಿನಾಡು' ದಿನಪತ್ರಿಕೆಯ ಮೈಸೂರು ವರದಿಗಾರನಾಗಿ, ಆ ಪತ್ರಿಕೆಗೆ ಸುದ್ದಿ ಸಂಗ್ರಹಗಳನ್ನು ಕಳಿಸುತ್ತಿದ್ದ; ಲೇಖನಗಳನ್ನೂ ಬರೆಯುತ್ತಿದ್ದ. ಅವನ ಬರವಣಿಗೆ ಗಂಭೀರ ವಿಷಯಗಳಿಗೆ ಮೀಸಲು. ಕನ್ನಡದಲ್ಲೂ ಇಂಗ್ಲಿಷಿನಲ್ಲೂ ಸೊಗಸಾದ ಗದ್ಯವನ್ನು ಬರೆಯುತ್ತಿದ್ದ ಮೂರ್ತಿ ಗ್ರಂಥರಚನೆಗೆ ತೊಡಗದೆ ಇದ್ದದ್ದು ಗ್ರಂಥಲೋಕಕ್ಕೆ ದೊಡ್ಡ ನಷ್ಟ ಎಂದೇ ನನ್ನ ತಿಳಿವಳಿಕೆ. 'ಹಿಂದೂ' ಪತ್ರಿಕೆಯಲ್ಲಿ ಆರ್ಥಿಕ ವಿಷಯದ ಗ್ರಂಥಗಳು ಒಂದೆರಡನ್ನು ವಿಮರ್ಶೆ ಮಾಡಿದ್ದನೆಂದು ನನ್ನ ನೆನಪು. 'ಜೀವನ' ಪತ್ರಿಕೆಗೂ ಒಂದೆರಡು ಕನ್ನಡ ಲೇಖನಗಳನ್ನು ಬರೆದಿರಬೇಕು. ಆತ ಉದ್ಯೋಗದಿಂದ ವಿಶ್ರಾಂತನಾಗಿ ಪೂರ್ಣ ವಿಶ್ರಾಂತಿ ಸುಖವನ್ನು ಅನುಭೋಗಿಸುವಂತಾದ ಮೇಲೆ ಕನ್ನಡದಲ್ಲಿ ಆತನಿಂದ ಆರ್ಥಿಕ ವಿಷಯಗಳನ್ನು ಕುರಿತು ಗ್ರಂಥರಚನೆ ಮಾಡಿಸಬೇಕು ಎಂಬ ಆಲೋಚನೆ ಇತ್ತು. ಈ ವಿಷಯವಾಗಿ ಒಮ್ಮೆ ಸೂಚನೆಯನ್ನೂ ಕೊಟ್ಟಿದ್ದೆ. ಆದರೆ ಅರುವತ್ತು ತುಂಬುವಷ್ಟರಲ್ಲಿ ವಿಧಿ ಆತನನ್ನು ನಮ್ಮಿಂದ ಅಗಲಿಸಿತು.

ನರಸಿಂಹಮೂರ್ತಿ ಅಸಿಸ್ಟೆಂಟ್ ಕಮೀಷನರ್ ಆಗಿ ನೇಮಕಗೊಳ್ಳುವ ಮುನ್ನ ಮಿತ್ರ ಆರ್. ಕೆ. ಶ್ರೀನಿವಾಸನ್ ಅವರ (ಕಾದಂಬರಿಕಾರ ಆರ್. ಕೆ. ನಾರಾಯಣ್ ಅವರ ತಮ್ಮ) ಜೊತೆಗೂಡಿ "Labour and Housing in Bangalore City" ಎಂಬ ವಿಷಯವಾಗಿ ಅಧ್ಯಯನ ನಡೆಸಿದ್ದು ಆ ಸಂಬಂಧದ ಸಂಶೋಧನ ಪ್ರಬಂಧ ಮೈಸೂರು ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರ ಶಾಖೆಯಿಂದ ಪ್ರಕಟವಾಯಿತು. 1950ರಲ್ಲಿ ಮೈಸೂರು ಮಹಾರಾಜರವರ ಕಾಲೇಜಿನ ಶತಮಾನೋತ್ಸವ ನಡೆಯಿತಷ್ಟೆ. ಆ ಉತ್ಸವದ ಸವಿನೆನಪಿಗೆಂದು ಪ್ರಕಟವಾಗಿರುವ ಸಂಪುಟದಲ್ಲಿ ನರಸಿಂಹಮೂರ್ತಿ ಬರೆದಿರುವ "The Union of My Time" ಎಂಬ ನೆನಪಿನ ನುಡಿಚಿತ್ರ ಲಘುಲಹರಿಯ ಬರವಣಿಗೆಯಲ್ಲೂ ಆತನ ಸಾಮರ್ಥ್ಯ ಹೇಗೆ ಬಹು ಫಲಗಳನ್ನು ಕೊಡಬಹುದಾಗಿತ್ತು ಎನ್ನುವುದಕ್ಕೆ ನಿದರ್ಶನವಾಗಿದೆ. ಯೂನಿಯನ್ನಿನ ಇಂಗ್ಲಿಷ್ ಚರ್ಚಾಕೂಟಗಳಲ್ಲಿ ಭಾಗವಹಿಸುತ್ತಿದ್ದ

ನಮ್ಮ ಗುರುಗಳ ವಾಗ್ವೈಖರಿಯನ್ನು ನರಸಿಂಹಮೂರ್ತಿ ಬಣ್ಣಿಸಿರುವ ರೀತಿಯಲ್ಲಿ ಸೂಕ್ಷ್ಮ ನಿರೀಕ್ಷಣ ಮತ್ತು ಲಘುಹಾಸ್ಯ ಮಿನುಗುವುದನ್ನು ಕಾಣಬಹುದು :

"A noteworthy feature of union debates was the keen interest evinced in them not only by students but also by members of the staff from whom we derived inspiration and intellectual sustenance. Speaking of union debates, one can never forget certain personalities - Principal J. C. Rollo who enlivened the dullest of subjects with a style of speech fresh like air in the fields around Maharaja's College on a morning after a night of summer rain and with delightful humour, Professor A. B. Mackintosh whose child-like eyes twinkled with mischief when he countered heavy argument with delicate sarcasm; Professor A. R. Wadia whose silvery eloquence compelled respectful hearing; Professor V. L. D'Souza who could, with or without previous notice, make an appropriate speech for any occasion, and whose jokes, stories and anecdotes made him the most popular "Mr. Speaker"; Professor C. R. Narasimha Sastry who spoke English with Vedic accent and whose undisguised cynicism thrust points home : Sri N. Kasturi whose genuine wit and refreshing outlook marked him out as an accomplished speaker; and Sri M. A. Venkata Rao whose profound learning and fluency made one wonder whether thought or speech was the quicker of the two with him."

ನಮ್ಮ ಪೂರ್ಣನ ವಾಗ್ಮಿಯತೆಯ ಬಗೆಗೆ ನರಸಿಂಹಮೂರ್ತಿ ಹೇಳಿರುವ ಮಾತುಗಳನ್ನು ಇಲ್ಲಿ ಉದ್ಧರಿಸದೆ ಇರಲಾರೆ :

"The late Sri K. R. Purna, who enriched college life in many ways, was a speaker of great ability, his general knowledge and deep study of subjects were excelled only by his powers of expression."

ಇನ್ನೊಂದು ಮುಖ್ಯ ಸಂಗತಿಯನ್ನು ಇಲ್ಲಿ ಉಲ್ಲೇಖಿಸಬೇಕು : ಮೈಸೂರಿನ ಅಗ್ರಹಾರದಲ್ಲಿ, ನನ್ನ ಕಾಲೇಜು ವ್ಯಾಸಂಗದ ದಿನಗಳಲ್ಲಿ, ನಾನು ವಾಸವಾಗಿದ್ದ ಬೀದಿಯ ಹಿಂದಿನ ಬೀದಿಯಲ್ಲಿ ಸುಮಾರು 12 ವರ್ಷಗಳ ಎಳೆಪರೆಯದ ಬಾಲಿಕೆ ಮದುವೆಯಾದ

ತರುಣದಲ್ಲಿ ವಿಧವೆಯಾದದ್ದು ನನ್ನ ಹೃದಯವನ್ನು ಒಂದಿತ್ತು.ಆ ಸಂದರ್ಭ. ಆಗ ಬರೆದ ನನ್ನ ಮೊದಲ ನಾಟಕ 'ಹೂವಿನ ಆಸೆ'ಗೆ ಸ್ಫೂರ್ತಿ ನೀಡಿತು. ನಾಟಕದಲ್ಲಿ ಬಾಲವಿಧವೆಗೆ ನಾನು ಮದುವೆ ಮಾಡಿಸಿದ್ದೇನೆ. ಆದರೆ ವಾಸ್ತವ ಜೀವನದಲ್ಲಿ ಆ ವಿಧವೆ ಪುನರ್ವಿವಾಹ ವಾಗುವ ಪುಣ್ಯ ಪಡೆದಿರಲಿಲ್ಲ. ಸುಮಾರು 1934ರಲ್ಲಿ ಬರೆದ ನನ್ನ ನಾಟಕ ಪ್ರಕಟವಾದದ್ದು 1936ರಲ್ಲಿ. ಈ ನಾಟಕವನ್ನು ನರಸಿಂಹಮೂರ್ತಿ ಓದಿದ್ದನೋ ಇಲ್ಲವೋ ನಾನರಿಯೆ. ಅಂತೂ, ಆತ ಬಾಲವಿಧವೆಯಾದ ಕನ್ಯೆಯನ್ನು ಮದುವೆಯಾದ ಸುದ್ದಿಯನ್ನು ಕೇಳಿ ನನಗೆ ಸಂತೋಷವಾಯಿತೆಂದು ಹೇಳಬೇಕಾಗಿಲ್ಲವಷ್ಟೆ. ನಾನು ನಾಟಕದ ಮೂಲಕ 'ಆಡಿ' ತೋರಿಸಿದ್ದನ್ನು ಆತ 'ಮಾಡಿ' ತೋರಿಸಿದ್ದ. ಸಮಾಜದ ಲೋಪದೋಷಗಳು ನಿವಾರಣೆಯಾಗಬೇಕಾದರೆ ಆಡಿದರೆ ಸಾಲದು, ಮಾಡಿ ಮಾರ್ಗದರ್ಶಕರಾಗಬೇಕು, ನರಸಿಂಹಮೂರ್ತಿ ಮಾಡಿದ ಹಾಗೆ. ಇಂದಿನ ದಿನಗಳಲ್ಲಿ ಬಾಲವಿಧವೆಯರ ಸಮಸ್ಯೆ ಇಲ್ಲವೆಂದೇ ಹೇಳಬೇಕು. ಅಂದಿನ ದಿನಗಳಲ್ಲಿ ನರಸಿಂಹಮೂರ್ತಿ ಇಟ್ಟದ್ದು ನಿಜವಾಗಿ ಒಂದು ದಿಟ್ಟ ಕ್ರಾಂತಿಕಾರಿ ಹೆಜ್ಜೆಯಾಗಿತ್ತು.

ವಿದ್ಯಾರ್ಥಿ ಜೀವನದಲ್ಲಿ ನರಸಿಂಹಮೂರ್ತಿ ಅನಾಥಾಲಯದ ನಿವಾಸಿ ಯಾಗಿದ್ದುದರಿಂದ ಆತ ಸಹಜವಾಗಿಯೆ 'ತಾತಯ್ಯ'ನವರ ಪ್ರಭಾವಕ್ಕೆ ಒಳಗಾಗಿದ್ದ. 'ತಾಯಿನಾಡು' ಪತ್ರಿಕೆಯ ಸಂಪಾದಕರಾಗಿದ್ದ ಪಿ. ಆರ್. ರಾಮಯ್ಯನವರ ಸಂಪರ್ಕವೂ ನರಸಿಂಹಮೂರ್ತಿಯ ಮೇಲೆ ಪ್ರಭಾವ ಬೀರಿತ್ತು. ಹೀಗಿರುತ್ತ, ವಿದ್ಯಾರ್ಥಿ ದಶೆಯಲ್ಲಿ ಇತರ ವಿದ್ಯಾರ್ಥಿಗಳಲ್ಲಿ ಕಂಡು ಬರುತ್ತಿದ್ದುದಕ್ಕಿಂತ ಹೆಚ್ಚು ತೀವ್ರವಾದ ರೀತಿಯಲ್ಲಿ ರಾಷ್ಟ್ರಪ್ರೇಮ ಆತನಲ್ಲಿ ವ್ಯಕ್ತಪಟ್ಟಿತ್ತು. ಆದರೆ ಆತನ ಜೀವನ ಗತಿಯನ್ನು ಹಿಡಿತದಲ್ಲಿಟ್ಟುಕೊಂಡಿದ್ದ ವಿಧಿ ಮೂರ್ತಿಯ ಮನಸ್ಸನ್ನು ಎಂ. ಸಿ. ಎಸ್. ಪರೀಕ್ಷೆಯ ಕಡೆಗೆ ಸೆಳೆಯಿತು. ಆ ಪರೀಕ್ಷೆಯಲ್ಲಿ ಆತ 'ರ್‍ಯಾಂಕ್' ಗಳಿಸಿ, ಮೈಸೂರು ಸಿವಿಲ್ ಸರ್ವಿಸ್ಸಿಗೆ ಸೇರಿದ; ಕಾಲಕ್ರಮದಲ್ಲಿ, ದಕ್ಷ ಅಧಿಕಾರಿ ಎಂದು ಅಧಿಕಾರಿ ವಲಯಗಳಲ್ಲಿ ಮನ್ನಣೆ ಪಡೆದ. ಅಧಿಕಾರಾವಧಿಯ ಕಡೆಯ ಭಾಗದಲ್ಲಿ, ಕೊಡಗಿನಲ್ಲಿ ಚೀಫ್ ಸೆಕ್ರೆಟರಿಯಾಗಿದ್ದಾಗ, ಆತನ ಆರೋಗ್ಯ ಹದಗೆಟ್ಟಿತು. ಆ ಕಾರಣದಿಂದ ಬೆಂಗಳೂರಿಗೆ ವರ್ಗವಾಗಿ ಬಂದದ್ದಾಯಿತು. ಮತ್ತೆ ಎಳೆಕೂಡಿಕೊಂಡದ್ದರಿಂದಾಗಿ ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿಯವರ, ಮಂಗಳಾ ಅವರ ಕನ್ನಡ ಕೃತಿಗಳು ನನಗೆ ಉಡುಗೊರೆಯಾಗಿ ಬರತೊಡಗಿದವು. ಮಂಗಳ ನನ್ನ ಕವಿತೆಗಳನ್ನು ಕುರಿತು ಪತ್ರಿಕೆಯಲ್ಲಿ ಅಧ್ಯಯನಪೂರ್ಣವೂ, ವಿಮರ್ಶಾತ್ಮಕವೂ ಆದ ಲೇಖನವನ್ನು ಬರೆದರು.

ಸದಾ ಸ್ನೇಹ ಸೂಸುವ ಮುಗುಳು ನಗೆಗಿಂತ ಹೆಚ್ಚಿನ ಕೊಡುಗೆಯನ್ನು ನರಸಿಂಹಮೂರ್ತಿಯಿಂದ ನಾನು ಎಂದೂ ಬಯಸಿರಲಿಲ್ಲ. ಅರವತ್ತರ ಅಂಚಿನಲ್ಲಿದ್ದ ಆತನ ಅಂತ್ಯ ದರ್ಶನ ಪಡೆಯುವ ದೌರ್ಭಾಗ್ಯದಲ್ಲಿಯೂ ಆ ಮುಗುಳು ನಗೆಯ ಭಾಗ್ಯ ಪ್ರಾಪ್ತಿ ನನ್ನ ಪಾಲಿಗೆ ಉಳಿದೇ ಇತ್ತು.

# ಅಪೂರ್ವ ವ್ಯಕ್ತಿತ್ವದ ಸಂಭಾವಿತ ಅಧಿಕಾರಿ

**ಜಿ. ವೆಂಕಟಸುಬ್ಬಯ್ಯ**

ಈ ಶತಮಾನದ ಮೂವತ್ತರ ದಶಕದಲ್ಲಿ ಮೈಸೂರಿನ ಮಹಾರಾಜ ಕಾಲೇಜು, ಭಾರತದ ಬಹುಪ್ರಸಿದ್ಧ ಶಿಕ್ಷಣ ಸಂಸ್ಥೆಗಳಲ್ಲಿ ಪ್ರಧಾನವಾದ ಸ್ಥಾನವನ್ನು ಗಳಿಸಿತ್ತು. ಮೈಸೂರಿನ ಮಹಾರಾಜರು ಭಾರತದ ಅನೇಕ ಕಡೆಗಳಿಂದ ಪ್ರಖ್ಯಾತ ವಿದ್ವಾಂಸರನ್ನು ಆಹ್ವಾನಿಸಿ, ಆ ಕಾಲೇಜಿನ ಬೇರೆ ಬೇರೆ ಶಿಕ್ಷಣ ವಿಷಯಗಳಲ್ಲಿ ಬೋಧನೆ ಮಾಡಲು ಗೌರವದ ಸ್ಥಾನಗಳನ್ನು ನೀಡಿದ್ದರು. ಇಂಥ ವಿವೇಕದ ಫಲವಾಗಿ ಮಹಾರಾಜ ಕಾಲೇಜು ಭಾರತದಲ್ಲೆಲ್ಲ ಹೆಸರುವಾಸಿಯಾಗಿತ್ತು. ಪ್ರತಿಯೊಂದು ಬೋಧನ ವಿಷಯದಲ್ಲಿಯೂ ಅತಿ ಪ್ರೌಢ ವಿದ್ವಾಂಸರೇ ಬೋಧಕರಾಗಿದ್ದರು. ಇಂಗ್ಲಿಷ್ ಭಾಷಾ ಸಾಹಿತ್ಯ, ಕನ್ನಡ ಭಾಷಾ ಸಾಹಿತ್ಯ, ಸಂಸ್ಕೃತ ಭಾಷಾ ಸಾಹಿತ್ಯ, ಪರ್ಷಿಯನ್ ಭಾಷಾ ಸಾಹಿತ್ಯಗಳಲ್ಲದೆ ಫ್ರೆಂಚ್ ಭಾಷೆಗೆ ಸ್ಥಾನವನ್ನು ನೀಡಲಾಗಿತ್ತು. ದರ್ಶನಶಾಸ್ತ್ರ, ಅರ್ಥಶಾಸ್ತ್ರ, ಚರಿತ್ರೆ, ರಾಜ್ಯಶಾಸ್ತ್ರ, ಮನಃಶಾಸ್ತ್ರ ಮುಂತಾದವುಗಳಲ್ಲಿ ಪ್ರೌಢ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನೂ ನೀಡಲಾಗುತ್ತಿತ್ತು. ಒಂದೊಂದು ವಿಷಯಕ್ಕೂ ವಿದ್ಯಾರ್ಥಿಗಳ ಅರ್ಹತೆಯನ್ನು ಗಮನಿಸಿ ನಾಲ್ಕೈದು ವಿದ್ಯಾರ್ಥಿಗಳನ್ನು ಮಾತ್ರ ಆರಿಸಲಾಗುತ್ತಿತ್ತು. ಶಿಷ್ಯರು ನಾಲ್ಕಾರಿದ್ದರೆ ಅವರಿಗೆ ಬೋಧನೆ ಮಾಡುವವರು ಏಳೆಂಟು ಜನರಿರುತ್ತಿದ್ದರು. ಎಲ್ಲರೂ ಕಣ್ಣಲ್ಲಿ ಕಣ್ಣಿಟ್ಟು ಶಿಷ್ಯರನ್ನು ತರಬೇತು ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೆ ತರಗತಿಗಳಿಗೆ ತಪ್ಪಿಸಿಕೊಳ್ಳುವ, ಮುಂದಿನ ವಾರದ ಅಭ್ಯಾಸವನ್ನು ಇನ್ನೂ ಮುಂದಕ್ಕೆ ತಳ್ಳುವ ಅವಕಾಶಗಳೇ ಇರುತ್ತಿರಲಿಲ್ಲ. ವಿದ್ಯಾರ್ಥಿಗಳೂ ಬುದ್ಧಿವಂತರೇ ಆಗಿದ್ದುದರಿಂದ ಬೋಧನೆ ಮತ್ತು ವ್ಯಾಸಂಗ ಇವು ಒಂದು ವಿಧವಾದ ಪೈಪೋಟಿಯಿಂದ ನಡೆಯುತ್ತಿದ್ದವು. ಇಂಥ ಸಮಯದಲ್ಲಿ ತಾವು ವಿದ್ಯಾರ್ಥಿಗಳಾಗಿರುವುದೇ ಒಂದು ಸುಯೋಗವೆಂದು ಯುವಕರೆಲ್ಲ ಭಾವಿಸುತ್ತಿದ್ದರು.

ಇಂಟರ್‌ಮೀಡಿಯೆಟ್ ಪರೀಕ್ಷೆಯೇ ಒಂದು ಒರೆಗಲ್ಲಾಗಿದ್ದು, ಅದರಲ್ಲಿ ಮೊದಲ ಸಲವೇ ತೇರ್ಗಡೆಯಾದರೆ ಆ ವಿದ್ಯಾರ್ಥಿ ಬಲ್ಲಿದನೆಂದು ಹೆಸರು ಪಡೆಯುತ್ತಿದ್ದನು. ಅಂಥವರಲ್ಲಿ ತಮ್ಮ ವಿಭಾಗಕ್ಕೆ ಬೇಕಾದವರನ್ನು ಆರಿಸಿಕೊಳ್ಳುವುದರಲ್ಲಿ ಪ್ರಾಧ್ಯಾಪಕರೂ ಮುಂದಾಗುತ್ತಿದ್ದರು. ವಿಜ್ಞಾನ ವಿಭಾಗದಲ್ಲಿ ಶೇ. 10 -12 ಜನರೂ, ಕಲಾವಿಭಾಗದಲ್ಲಿ ಶೇ. 14 -15 ಜನರೂ ತೇರ್ಗಡೆಯಾಗುತ್ತಿದ್ದ ಕಾಲ. ಮೊದಲ ದರ್ಜೆ ಎಂಬುದು ಕನಸಿನ ಮಾತು. ಎರಡನೆಯ ದರ್ಜೆಯಲ್ಲಿ ತೇರ್ಗಡೆಯಾಗುವವನು ಬಹುಬುದ್ಧಿವಂತನೆಂಬ ಕೀರ್ತಿಗೆ ಪಾತ್ರನಾಗುತ್ತಿದ್ದನು.

ಹೀಗೆ ತೇರ್ಗಡೆಯಾದರೂ ಎಲ್ಲರಿಗೂ ಆನರ್ಸ್ ತರಗತಿಗಳಲ್ಲಿ ಸ್ಥಳವೇ

ದೊರೆಯುತ್ತಿರಲಿಲ್ಲ. ಅಲ್ಲಿಯೂ ಆಯ್ಕೆ. ಹೀಗೆ ಆಯ್ಕೆಯಾದವರು ಆ ಕಾಲೇಜಿನ ಭವಿಷ್ಯವನ್ನು ಬೆಳಗುವ ವ್ಯಕ್ತಿಗಳೆಂದು ಇತರ ವಿದ್ಯಾರ್ಥಿಗಳಿಗೆ ಕಾಣುತ್ತಿದ್ದರು. ಮೊದಲ ಆನರ್ಸ್‌ಗೆ ಸೇರಿದ ವಿದ್ಯಾರ್ಥಿಗಳಿಗೆ, ಅವರಿಗಿಂತ ಮುಂಚೆಯೇ ಸೇರಿ ಕೊನೆಯ ಆನರ್ಸ್ ತರಗತಿಯಲ್ಲಿಯೂ ಎಂ. ಎ. ತರಗತಿಯಲ್ಲಿಯೂ ಅಭ್ಯಾಸ ಮಾಡುತ್ತಿದ್ದವರು ಮಾದರಿ ವಿದ್ಯಾರ್ಥಿಗಳಾಗಿ ಕಾಣುತ್ತಿದ್ದರು. ಅವರಂತೆ ತಾವೂ ಹೆಸರು ಗಳಿಸಬೇಕೆಂಬ ಉತ್ಸಾಹ ಮೊದಲ ಆನರ್ಸ್ ವಿದ್ಯಾರ್ಥಿಗಳಿಗೆ ಸ್ವಾಭಾವಿಕವಾಗಿಯೇ ಮೂಡುತ್ತಿತ್ತು.

ಇಂಥ ಕಾಲದಲ್ಲಿ ನಾನು ಕನ್ನಡದ ಮೊದಲ ಆನರ್ಸ್ ತರಗತಿಗೆ ಸೇರಿದೆ. ಈ ವಿಭಾಗದಲ್ಲಿ ನಾವು ಇಬ್ಬರು ವಿದ್ಯಾರ್ಥಿಗಳು ಮಾತ್ರ ಇದ್ದೆವು. ಎಂ. ಎ. ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಹಿರಿಯ ವಿದ್ಯಾರ್ಥಿಗಳ ನಡೆ-ನುಡಿಗಳನ್ನು ನಾವು ಬಹು ಕುತೂಹಲದಿಂದ ವೀಕ್ಷಿಸಿ ಅವರಂತೆ ನಡೆದುಕೊಳ್ಳಲು ಪ್ರಯತ್ನಪಡುತ್ತಿದ್ದೆವು.

ಅಂಥ ಹಿರಿಯ ವಿದ್ಯಾರ್ಥಿಗಳು ಕೆಲವರಿದ್ದರು. ಅವರಲ್ಲಿ ಮುಖ್ಯವಾಗಿ ನಮ್ಮ ಗಮನವನ್ನು ಸೆಳೆದ ವಿದ್ಯಾರ್ಥಿ ಆಕರ್ಷಕ ವ್ಯಕ್ತಿತ್ವದ ದಿ॥ ಸಿ. ನರಸಿಂಹಮೂರ್ತಿಗಳು. ಅವರು ಅರ್ಥಶಾಸ್ತ್ರ ವಿಭಾಗದಲ್ಲಿ ಪ್ರೊ॥ ವಿ. ಎಲ್. ಡಿಸೋಜಾ ಅವರ ಮೆಚ್ಚಿನ ವಿದ್ಯಾರ್ಥಿಯಾಗಿದ್ದರು. ತರಗತಿಗಳು ಮುಗಿದ ಮೇಲೆ ಅವರು ವಿಶ್ವವಿದ್ಯಾಲಯದ ಪುಸ್ತಕ ಭಂಡಾರಕ್ಕೆ ಅವರ ಗೆಳೆಯರೊಡನೆ ಹೋಗುತ್ತಿದ್ದರು. ಈ ಅಭ್ಯಾಸವನ್ನು ನಾವು ಅವರಿಂದ ಕಲಿತೆವು. ಅಂಥ ಕೆಲವು ಜನ ವಿದ್ಯಾರ್ಥಿಗಳ ಹೆಸರುಗಳು ನನ್ನ ನೆನಪಿನಲ್ಲಿವೆ. ತಾಂಡವೇಶ್ವರ, ದೊರೆಸ್ವಾಮಿ ಐಯ್ಯಂಗಾರ್, ವಿ. ಕೆ. ಶ್ರೀನಿವಾಸನ್, ಸತ್ಯನ್, ಆರ್. ಕೆ. ನಾರಾಯಣ್, ನಟೇಶ ಮೊದಲಿಯಾರ್, ಕೆ. ಆರ್. ಪೂರ್ಣ ಇತ್ಯಾದಿ. ಇವರೆಲ್ಲರೂ ತಮ್ಮ ತಮ್ಮ ಅಭ್ಯಾಸ ವಿಷಯದಲ್ಲಿ ಪ್ರಸಿದ್ಧರಾಗಿ ಮುಂದೆ ಉನ್ನತ ಸ್ಥಾನಗಳನ್ನು ಗಳಿಸಿ ನಾಡಿನಲ್ಲಿ ಗೌರವವನ್ನು ಸಂಪಾದಿಸಿದವರು.

ಕಾಲೇಜಿನ ಯೂನಿಯನ್ನಿನಲ್ಲಿ ನಡೆಯುತ್ತಿದ್ದ ಚರ್ಚಾಕೂಟಗಳಲ್ಲಿ ಅವರ ಪಾತ್ರ ಹಿರಿದು. ಕನ್ನಡದಲ್ಲಿಯೂ, ಇಂಗ್ಲಿಷಿನಲ್ಲಿಯೂ ಅವರು ವಾಚಾಳಿಕೆಯನ್ನು ಸಂಪಾದಿಸಿದ್ದರು. ವಿಷಯ ಸಂಗ್ರಹವೂ, ಅವುಗಳ ತಾರ್ಕಿಕ ನಿರೂಪಣೆ ಕಿರಿಯರಿಗೆ ಮಾರ್ಗದರ್ಶನವಾಗಿತ್ತು. ಇಂಥ ಹಿರಿಯರು ನಮಗೆ ದೃಷ್ಟಿಗೋಚರರಾಗಿದ್ದರೇ ಹೊರತು ಇವು ಚೇತೋಹಾರಿಯಾಗಿರುತ್ತಿತ್ತು. ಅವರ ಸ್ನೇಹವನ್ನು ಸಂಪಾದಿಸುವುದು ಅಸಾಧ್ಯವಾಗಿತ್ತು.

ಯಾವುದೋ ಕಾರಣದಿಂದ ನರಸಿಂಹಮೂರ್ತಿಯವರು ಎಂ. ಎ. ಪರೀಕ್ಷೆಯನ್ನು ಮೊದಲ ಸಲ ತೆಗೆದುಕೊಳ್ಳಲಿಲ್ಲ. ಮುಂದಿನ ವರ್ಷ ಅವರು ಆ ಪರೀಕ್ಷೆಯಲ್ಲಿ ಮೊದಲ ಸ್ಥಾನವನ್ನು ಪಡೆದರು. ಆಗಲೇ ನಮಗೆ ಅವರು ಅನಾಥಾಲಯದಲ್ಲಿದ್ದು, ಓದಿ ಇಂಥ ಸ್ಥಾನವನ್ನು ಪಡೆದರೆಂಬುದು ನಮ್ಮ ಅಧ್ಯಾಪಕರಿಂದ ತಿಳಿದುಬಂತು.

ಯೂನಿಯನ್ನಿನ ಕಾರ್ಯದರ್ಶಿಯಾಗಿ ಅವರು ಆಯ್ಕೆಯಾದ ವರ್ಷ ಡಾ॥ ಕೆ.ಬಿ. ಮಾಧವ ಅವರು ಅಧ್ಯಕ್ಷರಾದರು. ಅವರು ತುಂಬ ಹಾಸ್ಯಪರರಾದ ಗಣಿತಶಾಸ್ತ್ರ ಪ್ರಾಧ್ಯಾಪಕರು. ಇವರಿಬ್ಬರ ಆಡಳಿತದಲ್ಲಿ ಭಾರತದ ಅನೇಕ ಪ್ರಸಿದ್ಧ ರಾಜಕಾರಣಿಗಳೂ, ಸ್ವಾತಂತ್ರ್ಯದ ಹೋರಾಟಗಾರರೂ, ಆಡಳಿತ ನಿಪುಣರೂ, ರಾಷ್ಟ್ರ ನಿರ್ಮಾಣದಲ್ಲಿ ಆಸಕ್ತಿ ಇರುವ ವಿದ್ವಾಂಸರೂ ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಗಳನ್ನು ಮಾಡಿದರು. ಒಂದೊಂದೂ ನಿರಂತರ ಸ್ಮರಣೀಯವಾದ ಉಪನ್ಯಾಸ.

ನಾನು ಎಂ. ಎ. ವಿದ್ಯಾರ್ಥಿಯಾಗಿದ್ದಾಗ ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಗಳನ್ನು ಮತ್ತೆ ಪ್ರಾರಂಭಿಸಿದರು. ಅದರಲ್ಲಿ ಮೊದಲನೆಯ ಸ್ಥಾನವನ್ನು ಪಡೆದು ಸಿವಿಲ್ ಸರ್ವೀಸ್ ಅಧಿಕಾರವನ್ನು ನರಸಿಂಹಮೂರ್ತಿಗಳು ಪಡೆದರು. ಆಗ ಪರೀಕ್ಷಕರಲ್ಲಿ ಒಬ್ಬರಾಗಿದ್ದ ಬ್ರಿಟಿಷ್ ಅಧಿಕಾರಿ ಟಾಡ್ ಹಂಟರ್ ಎಂಬುವರು ಸಿ. ನರಸಿಂಹಮೂರ್ತಿಗಳಿಗೆ ಮೌಖಿಕ ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕಗಳನ್ನು ನೀಡಿದ್ದರೆಂದು ಜನಜನಿತವಾದ ಮಾತು ಇತ್ತು.

ಅಧಿಕಾರಕ್ಕೆ ಸೇರಿದ ಮೇಲೆ ಅವರು ಮಹಾರಾಜರಿಗೂ, ಸರ್ ಮಿರ್ಜಾ ಇಸ್ಮಾಯಿಲ್ ಅವರಿಗೂ ತುಂಬ ಆತ್ಮೀಯರಾದ ಸಹಾಯಕರಾಗಿ ಉದ್ಯೋಗಗಳನ್ನು ನಿರ್ವಹಿಸಿದರು. ಅನೇಕ ಬಗೆಯ ಅಧಿಕಾರಿಗಳಲ್ಲಿ ಅವರು ಜನಪ್ರಿಯ ಅಧಿಕಾರಿಯೆಂದೂ, ದೀನರಿಗೆ ಸಹಾಯ ಮಾಡಿದವರೆಂದೂ ಪ್ರಾಮಾಣಿಕರೆಂದೂ ಹೆಸರುವಾಸಿ ಆದರು.

ರಾಜ್ಯದ ಬಹುಮುಖ್ಯ ಅಧಿಕಾರವಾದ ಮುಖ್ಯ ಕಾರ್ಯದರ್ಶಿಗಳಾಗಿ ನೇಮಕವಾಗುವ ವೇಳೆಗೆ ಅವರಿಗೆ ಸಾವು ಬಂದು ಅಪ್ಪಳಿಸಿತು. ಆದರೆ ಎಂಥ ಸಾವು ! ಮಧ್ಯರಾತ್ರಿಯಲ್ಲಿ ಮಲಗಿದ್ದಾಗ ನಿದ್ದೆಯಲ್ಲೇ ಸಾವು. ಅನಾಯಾಸವಾದ ಮರಣ. ಮಗಳ ಮದುವೆಯಾಗಿ ಒಂದು ವಾರ ಕಳೆದಿರಲಿಲ್ಲ. ಅಂಥ ಸಮಯದಲ್ಲಿ ಸಂಸಾರಕ್ಕೆ ಈ ಆಘಾತವಾಯಿತು. ಸಾವಿರಾರು ಜನ ಕಡೆಯ ದರ್ಶನ ಮಾಡಿ ನಿಟ್ಟುಸಿರಿಟ್ಟರು. ಬೆಳಗುತ್ತಿದ್ದ ಜ್ಯೋತಿ ಆರಿಹೋಯಿತು. ನಾಡಿನ ಜನರಿಗೆಲ್ಲ ಬೇಕಾಗಿದ್ದ ಸತ್ವ ನಂದಿ ಹೋಯಿತು.

ಆದರೆ ಅವರು ಮರೆಯಲಾಗದ ವ್ಯಕ್ತಿತ್ವದ ನೆನಪನ್ನು ಬಿಟ್ಟು ಹೋಗಿದ್ದಾರೆ. ಕೊನೆ ಕೊನೆಯ ದಿನಗಳಲ್ಲಿ ನಾನು ಅವರ ಆತ್ಮೀಯತೆಯನ್ನು ಸಂಪಾದಿಸಿದ್ದೆ. ಆಗಾಗ ಮಾತುಕತೆಯಲ್ಲಿ ಭಾಗಿಯಾಗುತ್ತಿದ್ದೆ. ಒಂದೇ ಬೀದಿಯಲ್ಲಿ ಕೆಲವು ಕಾಲ ವಾಸ ಮಾಡುತ್ತಿದ್ದೆವು. ಅವೆಲ್ಲ ಈಗ ನೆನಪಾಗಿ ನಿಂತಿದೆ. ಆದರೆ ನಿರಂತರವಾಗಿ ನೆನಪಿಗೆ ಬರುವ ಅವರ ವ್ಯಕ್ತಿತ್ವ ಮಾತ್ರ ಕಣ್ಣಿಗೆ ಕಟ್ಟಿದಂತಿದೆ.

# ಆದರ್ಶ ಅಧಿಕಾರಿ

ಜಿ. ನಾರಾಯಣ

---

ಮೈಸೂರು ರಾಜ್ಯ ರಾಜಪ್ರಭುತ್ವ ಇದ್ದಾಗಲೇ ಇಡೀ ಭಾರತಕ್ಕೆ ಆದರ್ಶ ರಾಜ್ಯ ಎನಿಸಿಕೊಂಡಿತ್ತು. ಜನತೆಯ ಸರ್ವತೋಮುಖ ಅಭಿವೃದ್ಧಿಗೆ ಸಾಧಕವಾದ ಯೋಜನೆಗಳನ್ನು ರೂಪಿಸಿ, ಅವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿತ್ತು. ವ್ಯವಸಾಯ, ವಾಣಿಜ್ಯ, ಕೈಗಾರಿಕೆ, ನೀರಾವರಿ, ವಿದ್ಯುದುತ್ಪಾದನೆ ಮೊದಲಾದ ಕ್ಷೇತ್ರಗಳಲ್ಲೆಲ್ಲ ಅದು ಪ್ರಗತಿ ಸಾಧಿಸಿತ್ತು. ಆಡಳಿತ ನಿರ್ವಹಣೆಯಲ್ಲಿ ಪ್ರಜೆಗಳ ಪಾಲೂ ಇರಲೆಂದು ಪ್ರಜಾಪ್ರತಿನಿಧಿ ಸಭೆ, ನ್ಯಾಯ ವಿಧಾಯಕ ಸಭೆಗಳನ್ನು ಏರ್ಪಡಿಸಿತ್ತು. ಈ ಎಲ್ಲ ಪ್ರಗತಿ ಸಾಧನೆಗೆ ಜನಹಿತವನ್ನೇ ಧ್ಯೇಯವಾಗಿ ಹೊಂದಿದ್ದ ರಾಜ್ಯದ ಅರಸರು ಹಾಗೂ ಸಮರ್ಥರಾದ, ನಿಷ್ಠೆಯಿಂದ ಕೂಡಿದ ಆಡಳಿತಾಧಿಕಾರಿ ವರ್ಗ ಕಾರಣವೆಂದರೆ ಉತ್ಪ್ರೇಕ್ಷೆಯಲ್ಲ.

ಮೈಸೂರಿನ ರಾಜಪ್ರಭುತ್ವ ಇಂಡಿಯನ್ ಸಿವಿಲ್ ಸರ್ವೀಸ್ ಮಾದರಿಯಲ್ಲಿ ಮೈಸೂರು ಸಿವಿಲ್ ಸರ್ವೀಸ್ ವ್ಯವಸ್ಥೆಯನ್ನು ಮಾಡಿತ್ತು. ರಾಜ್ಯದ ಪ್ರತಿಭಾವಂತ ಯುವಕರು ಈ ಸರ್ವೀಸಿಗೆ ಆಯ್ಕೆಯಾಗುತ್ತಿದ್ದರು. ಅವರು ತಮ್ಮ ದಕ್ಷತೆ, ಸಾಮರ್ಥ್ಯ, ಆಡಳಿತ ನಿರ್ವಹಣೆಯಲ್ಲಿನ ಶ್ರದ್ಧೆ, ನಾಡಿನ ಹಿತಸಾಧನೆಯಲ್ಲಿನ ನಿಷ್ಠೆ – ಇವುಗಳಿಗೆ ಹೆಸರಾಗಿದ್ದರು. ಭಾರತಕ್ಕೆ ಸ್ವಾತಂತ್ರ್ಯ ಬಂದು, ಇಡೀ ರಾಷ್ಟ್ರದ ಸಂಘಟನೆಯಾದ ಅನಂತರ, ಮೈಸೂರು ಸಿವಿಲ್ ಸರ್ವೀಸಿನ ಅಧಿಕಾರಿಗಳು ಅನೇಕರು, ಭಾರತದ ಆಡಳಿತಾಧಿಕಾರ ವರ್ಗದಲ್ಲಿ (ಐ. ಎ. ಎಸ್.) ಮುಂದುವರಿದು ಕರ್ನಾಟಕ ರಾಜ್ಯಕ್ಕೆ ನಿಷ್ಠೆಯಿಂದ ಸೇವೆಸಲ್ಲಿಸಿ ಜನಪ್ರಿಯತೆ ಗಳಿಸಿದರು. ಇಂಥ ಅಧಿಕಾರಿಗಳಲ್ಲಿ ಅಗ್ರಶ್ರೇಣಿಗೆ ಸೇರಿದವರು ಶ್ರೀ ನರಸಿಂಹಮೂರ್ತಿ ಅವರು.

ನನಗೆ ಅವರ ನೇರ ಪರಿಚಯ ಆಗುವ ಮೊದಲೇ ಅವರ ದಕ್ಷತೆ, ಸಾಮರ್ಥ್ಯ, ನಿಸ್ಪೃಹತೆ, ಕರ್ತವ್ಯಶ್ರದ್ಧೆಗಳ ಬಗ್ಗೆ ಕೇಳಿ ತಿಳಿದಿದ್ದೆ. ನೇರ ಪರಿಚಯ ಆದ ನಂತರ ಅವರ ವಿಚಾರವಾಗಿ ನಾನು ಕೇಳಿದ್ದುದ್ದೆಲ್ಲಾ ನೂರಕ್ಕೆ ನೂರರಷ್ಟು ಸತ್ಯ ಎಂಬುದು ನನಗೆ ಮನವರಿಕೆಯಾಯಿತು. ಅದಕ್ಕೂ ಹೆಚ್ಚಾಗಿ ನನ್ನನ್ನು ಆಕರ್ಷಿಸಿದ್ದು ಅವರ ನಿರಾಡಂಬರ ಜೀವನ, ಸರಳತೆ, ಸ್ನೇಹಪರತೆ.

ಶ್ರೀ ನರಸಿಂಹಮೂರ್ತಿ ಅವರು 1937 - 38ರ ಸುಮಾರಿಗೆ ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರಾಗಿ ಸರ್ಕಾರಿ ನೌಕರಿಗೆ ಸೇರಿದರು. ಕ್ರಮ ಕ್ರಮವಾಗಿ ಡೆಪ್ಯುಟಿ ಕಮಿಷನರ್ ಮೊದಲಾದ ಮೇಲಿನ ಹುದ್ದೆಗಳಿಗೆ ಬಡ್ತಿ ಹೊಂದಿದರು. ಮೈಸೂರಿನ ಮುನಿಸಿಪಲ್

ಕಮಿಷನರಾಗಿಯೂ, ಡಿವಿಜನಲ್ ಕಮಿಷನರಾಗಿಯೂ ಅಧಿಕಾರ ನಿರ್ವಹಿಸಿದರು. ಇವರು ವಹಿಸಿಕೊಂಡಿದ್ದ ಎಲ್ಲ ಹುದ್ದೆಗಳಲ್ಲೂ ದಕ್ಷತೆ, ಸಾಮರ್ಥ್ಯ, ಕ್ರಿಯಾಶೀಲತೆ, ಪ್ರಾಮಾಣಿಕತೆಗಳಿಂದಾಗಿ ಕೀರ್ತಿ ಪಡೆದರು. ಮೇಲಾಗಿ ತಮ್ಮ ಸಹೋದ್ಯೋಗಿಗಳ ಹಾಗೂ ಸಾರ್ವಜನಿಕರ ಪ್ರೀತಿ ಗೌರವಗಳಿಗೂ ಪಾತ್ರರಾಗಿದ್ದರು.

ಶ್ರೀ ನರಸಿಂಹಮೂರ್ತಿ ಅವರು ಅಧಿಕಾರದ ಚೌಕಟ್ಟಿನೊಳಗೆ ಇದ್ದರೂ, ಅವರ ಆಸಕ್ತಿ ಅಷ್ಟಕ್ಕೇ ಸೀಮಿತವಾಗಿರಲಿಲ್ಲ. ಎಲ್ಲ ಸಾರ್ವಜನಿಕ ಕಾರ್ಯಗಳಲ್ಲೂ ಅವರು ಆಸಕ್ತಿ ಹೊಂದಿದ್ದರು. ವಿಶೇಷವಾಗಿ ಸಾಕ್ಷರತೆ, ಸಮಾಜ ಸುಧಾರಣೆ, ಸ್ತ್ರೀ ವಿದ್ಯಾಭ್ಯಾಸ ಮೊದಲಾದ ಕಾರ್ಯಗಳಲ್ಲಿ ಅವರಿಗೆ ವಿಶೇಷ ಒಲವು. ಅಕ್ಷರ ಪ್ರಚಾರ ಬಿರುಸಿನಿಂದ ನಡೆದು, ಜನತೆಯಲ್ಲಿನ ಅಜ್ಞಾನದ ಕತ್ತಲೆ ನಿವಾರಣೆ ಆಗುವವರೆಗೆ ಜನತೆಯ ನಿಜವಾದ ಪ್ರಗತಿ ಸಾಧ್ಯವಿಲ್ಲ ಎಂದು ನಂಬಿದ್ದವರು ಅವರು. ಆದ್ದರಿಂದಲೇ ಅಜ್ಞಾನದ, ಮೌಢ್ಯದ ವಿರುದ್ಧದ ಎಲ್ಲ ಕಾರ್ಯಕ್ರಮಗಳಲ್ಲೂ ಅವರು ಹೆಚ್ಚು ಆಸಕ್ತಿಯಿಂದ ಭಾಗವಹಿಸಿ ದುಡಿಯುತ್ತಿದ್ದರು.

ರಾಜ್ಯದ ಜನತೆಯ ಹಿತಸಾಧನೆಗಾಗಿ ದುಡಿಯುವುದು ಸಾಮಾನ್ಯವಾಗಿ ಅಂದಿನ ಆಡಳಿತಾಧಿಕಾರಿಗಳೆಲ್ಲರ ಧ್ಯೇಯವೇ ಆಗಿತ್ತು. ಅವರಿಗೆಲ್ಲಾ ವಿಶ್ವವಿಖ್ಯಾತ ಇಂಜನಿಯರ್ ಹಾಗೂ ಆಡಳಿತಗಾರ ದಿವಾನ್ ಸರ್ ಎಂ. ವಿಶ್ವೇಶ್ವರಯ್ಯ ಮತ್ತು ದಿವಾನ್ ಸರ್ ಮಿರ್ಜಾ ಅವರು ಮೇಲ್ಪಂಕ್ತಿ ಆಗಿದ್ದರು. ಮೈಸೂರು ರಾಜ್ಯ ಇಡೀ ವಿಶ್ವದಲ್ಲೇ ಆದರ್ಶ ರಾಜ್ಯವೆಂದು ಪ್ರಖ್ಯಾತವಾಗಬೇಕು ಎನ್ನುವುದು ಆ ಮಹಾನುಭಾವರ ಉದ್ದೇಶ. ಅವರಿಂದ ಸ್ಫೂರ್ತಿಗೊಂಡು ಆ ಉದ್ದೇಶ ಸಾಧನೆಗಾಗಿ ದುಡಿದ ಅಧಿಕಾರಿಗಳ ಶ್ರೇಣಿಗೆ ಸೇರಿದವರು ಶ್ರೀ ನರಸಿಂಹಮೂರ್ತಿ ಅವರು.

ಶ್ರೀ ನರಸಿಂಹಮೂರ್ತಿ ಅವರು ಬಡತನದಿಂದಲೇ ಜೀವನ ಆರಂಭಿಸಿ, ಸ್ವಪ್ರಯತ್ನದಿಂದ ಅಭ್ಯುದಯವನ್ನು ಕಂಡವರು. ವಿದ್ಯಾರ್ಥಿ ದೆಸೆಯಿಂದಲೇ ಅವರು ತಮಗೆ ಅಗತ್ಯವಾದ ಹಣವನ್ನು ಒದಗಿಸಿಕೊಳ್ಳಲು ತುಂಬಾ ದುಡಿದದ್ದುಂಟು. ಹೀಗಿದ್ದರೂ ಅವರು ತರಗತಿಗಳಲ್ಲಿ ಯಾವಾಗಲೂ ಮುಂದು. ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆ. ಇದರಿಂದ ಅಂದಿನ ಪ್ರಾಧ್ಯಾಪಕರುಗಳಾದ ರಾಲೋ, ಎನ್. ಎಸ್. ಸುಬ್ಬರಾವ್ ಮೊದಲಾದವರಿಗೆ ತುಂಬಾ ಮೆಚ್ಚು.

ಶ್ರೀ ನರಸಿಂಹಮೂರ್ತಿ ಅವರು ಸರ್ಕಾರದ ನೌಕರಿಗೆ ಸೇರುವ ಮೊದಲು ಕೆಲವು ಕಾಲ ಪತ್ರಿಕೋದ್ಯೋಗಿಗಳಾಗಿ ಎಲ್ಲ ಸಾರ್ವಜನಿಕ ಸಮಸ್ಯೆಗಳನ್ನು ತೀವ್ರಾಸಕ್ತಿಯಿಂದ ಗಮನಿಸಿ, ತಮ್ಮ ಪತ್ರಿಕೆಗೆ ವರದಿ ಮಾಡುತ್ತಿದ್ದರು. ಪತ್ರಿಕೋದ್ಯೋಗಿಯಾಗಿ ಅವರು ಸಾರ್ವಜನಿಕರೊಡನೆ ಬೆಳೆಸಿಕೊಂಡ ಸಂಪರ್ಕ, ಸಾಮಾಜಿಕ ಸಮಸ್ಯೆಗಳಲ್ಲಿ ತಳೆದಆಸಕ್ತಿ ಅವರು ಮುಂದೆ ಅಧಿಕಾರಿಗಳಾದ ಅನಂತರವೂ ಮುಂದುವರೆಯಿತು. ಅಧಿಕಾರಿಗಳಾಗಿ

ಅವರು ಎಲ್ಲ ಪ್ರಶ್ನೆಗಳನ್ನೂ ತುಂಬ ಮಾನವೀಯ ದೃಷ್ಟಿಯಿಂದಲೂ ಪರಿಶೀಲಿಸಲು ಅವರು ಕೆಲಕಾಲ ಪತ್ರಿಕೋದ್ಯಮಿಯಾಗಿದ್ದು ಪಡೆದ ಅನುಭವ ಕಾರಣವೆಂದರೆ ತಪ್ಪಾಗಲಾರದು.

ಶ್ರೀ ನರಸಿಂಹಮೂರ್ತಿ ಅವರದು ತುಂಬಾ ಆಕರ್ಷಕ ವ್ಯಕ್ತಿತ್ವವೂ ಹೌದು. ತಮ್ಮ ಸರಳತೆ, ಸ್ನೇಹಪರತೆಗಳಿಂದ ಎಲ್ಲರ ವಿಶ್ವಾಸಕ್ಕೂ ಪಾತ್ರರಾಗಿದ್ದರು. ಅವರು ಎಷ್ಟೊಂದು ಸರಳರು, ನಿಗರ್ವಿ ಎಂದರೆ ಅವರನ್ನು ತಿಳಿಯದವರು ಯಾರಾದರೂ ನೋಡಿದರೆ ಇವರು ನಿಜಕ್ಕೂ ಉನ್ನತಾಧಿಕಾರಿಯೋ ಎಂದು ಶಂಕಿಸುತ್ತಿದ್ದುದುಂಟು.

ಇಂಥ ಆದರ್ಶ ಅಧಿಕಾರಿ ಅಕಾಲದಲ್ಲೇ ವಿಧಿವಶರಾದುದು ದೌರ್ಭಾಗ್ಯ. ಅವರು ಬದುಕಿದ್ದಿದ್ದರೆ, ಅವರಿಂದ ದೇಶಕ್ಕೆ ಜನತೆಗೆ ಇನ್ನೂ ಹೆಚ್ಚಿನ ಸೇವೆ ಸಲ್ಲುತ್ತಿತ್ತು. ಅವರನ್ನು ತಿಳಿದವರೆಲ್ಲರ ಮನಸ್ಸಿನಲ್ಲೂ ಅವರ ನೆನಪು ಸದಾ ಹಸಿರು.

# ಮೂರ್ತಿ

ಬಿ. ಆರ್. ಸುಬ್ಬರಾವ್

---

1930ನೇ ಇಸವಿ. ಆಗ ಶ್ರೀಮಾನ್ ಎಂ. ವೆಂಕಟಕೃಷ್ಣಯ್ಯನವರ ಕೃಪಾಶ್ರಯದಲ್ಲಿ ಮೈಸೂರು ಅನಾಥಾಲಯ ಸಮರ್ಪಕವಾಗಿ ನಡೆದುಬಂದಿತ್ತು. ಅವರ ಪತ್ರಿಕೆ ಸಂಪದಭ್ಯುದಯ ಬ್ರಿಟಿಷರ ದಬ್ಬಾಳಿಕೆಯಿಂದ ಮುಟ್ಟುಗೋಲಾಗಿತ್ತು. ಆದರೂ ಧೈರ್ಯಗೆಡದೆ ಹಿಂದೂ ಮೊದಲಾದ ಪತ್ರಿಕೆಗಳಲ್ಲಿ ಅನಾಥಾಲಯದ ವಿದ್ಯಾರ್ಥಿಯಾಗಿದ್ದ ಶ್ರೀಮಾನ್ ಸಿ. ನರಸಿಂಹಮೂರ್ತಿಗಳವರು ತಾತಯ್ಯನವರು ಹೇಳುತ್ತಿದ್ದ ಇಂಗ್ಲಿಷ್ ಸಮಾಚಾರವನ್ನು ಬರೆದು ಅಚ್ಚಿಗೆ ಕಳುಹಿಸುತ್ತಿದ್ದರು. ನಾನು ಕನ್ನಡ ವಿಷಯ ಹೇಳಿದ್ದನ್ನು ಬರೆದುಕೊಡುತ್ತಿದ್ದೆ. ಅದನ್ನು ಸಹ ಪತ್ರಿಕೆಗಳಿಗೆ ಅಚ್ಚು ಮಾಡಲು ಕಳುಹಿಸುತ್ತಿದ್ದರು. ಇದರಿಂದ ನಮಗೆ ಒಂದು ಬಗೆಯ ಸೇವೆಯ ಹೆಮ್ಮೆ. ಇನ್ನೊಂದು ಬಗೆಯಲ್ಲಿ ತಿಳಿವು ಅಥವಾ ಭಾಷಾಜ್ಞಾನ ಹೆಚ್ಚಾಗುತ್ತಿತ್ತು. ಶ್ರೀಮಾನ್ ತಾತಯ್ಯನವರ ಆಶೀರ್ವಾದವೇ ನಮ್ಮ ಶ್ರೇಯಸ್ಸು.

ಶ್ರೀಮಾನ್ ಸಿ. ನರಸಿಂಹಮೂರ್ತಿಗಳವರು ಮಿತಭಾಷಿ. ಅವರ ಸರಳತೆ, ಸ್ನೇಹ, ಅನುಕಂಪದಿಂದ ಕೂಡಿದ ವ್ಯಕ್ತಿತ್ವ ಎಂಥವರನ್ನಾದರೂ ಆಕರ್ಷಿಸುತ್ತಿತ್ತು. ಅವರು ಮೈಸೂರು ಮುನಿಸಿಪಲ್ ಕಮಿಷನರ್ ಆಗಿದ್ದಾಗಲೂ, ಡೈರಕ್ಟರ್ ಆಫ್ ಪಬ್ಲಿಕ್ ಇನ್ಸ್ಟ್ರಕ್ಷನ್ ಆಗಿದ್ದಾಗಲೂ, ಮೈಸೂರು ಡಿವಿಜನಲ್ ಕಮಿಷನರ್ ಆಗಿದ್ದಾಗಲೂ ನಾನು ಸಾಂಪ್ರದಾಯಿಕವಾಗಿ ಅವರಲ್ಲಿಗೆ ಹೋಗಿದ್ದಾಗ ತಡಮಾಡಿ ನಿಲ್ಲಗೊಡದೆ ಕೂಡಲೆ ತಮ್ಮ ಬಳಿಗೆ ಬರಮಾಡಿಕೊಂಡು ಅವರ ಸಮಾನ ವಯಸ್ಕರಾದ ನಮ್ಮ ಅಣ್ಣಂದಿರನ್ನು ವಿಚಾರಿಸಿ ನನ್ನ ಬಗೆಗೂ ವಿಚಾರಿಸಿ ಮನಸ್ಸಂತೋಷಪಡಿಸುತ್ತಿದ್ದರು. ಹುದ್ದೆ ದೊಡ್ಡದಾದರೂ ಅವರ ಸರಳತೆ ಎದ್ದು ಕಾಣುತ್ತಿತ್ತು.

ಅವರು ಅಧಿಕಾರಿಗಳ ಶ್ರೇಷ್ಠಮಟ್ಟದಲ್ಲಿದ್ದರು. ಅವರಲ್ಲಿ ಗಂಭೀರಭಾವ ಎದ್ದು ಕಾಣುತ್ತಿತ್ತು. ಅವರ ವಿವಾಹದ ಆರತಕ್ಷತೆಗೆ ನನ್ನ ಅಣ್ಣಂದಿರೊಡನೆ ಹೋಗಿದ್ದೆನು. ಮೈಸೂರಿನಲ್ಲಿ ಹಾರ್ಡ್‌ವಿಕ್ ಕಾಲೇಜ್ ರಸ್ತೆಯ ಒಂದು ಮನೆಯಲ್ಲಿ ಆರತಕ್ಷತೆ ನಡೆಯಿತು. ಆಗಿನ ಜನರ ಮೌಢ್ಯ ಅಭಿಪ್ರಾಯವನ್ನು ಮೂಲೆಗೊತ್ತಿ ಆದರ್ಶವಾಗಿ ವಿಧವಾ ವಿವಾಹ ಮಾಡಿಕೊಂಡು ತೃಪ್ತಿಯನ್ನು ಕಂಡುಕೊಂಡಿದ್ದರು. ಗಂಡಸು ಹೇಗಿದ್ದರೂ ವಿವಾಹ ಮಾಡಿಕೊಳ್ಳಬಹುದು. ಆದರೆ ಹೆಂಗಸು ತನ್ನ ಪತಿಯನ್ನು ಕಳೆದುಕೊಂಡಲ್ಲಿ ಆಕೆ ಉಸಿರು ಇರುವವರೆಗೆ ಒಂಟಿಬಾಳು ಬಾಳಬೇಕು ಏಕೆ ಎಂಬ ಚಿಂತನೆಯಿಂದ ಮಾರ್ಗದರ್ಶನ ಮಾಡಿ ತೋರಿಸಿದರು, ಸಮಾಜಕ್ಕೆ ಹೆದರದೆ.

ಅವರು ಕೊನೆಯಲ್ಲಿ ಬೆಂಗಳೂರಿನಲ್ಲಿ K.S.R.T.C. ವೈಸ್ ಛೇರ್ಮನ್ ಆಗಿದ್ದರು.

ಈ ವಿಚಾರ ಪತ್ರಿಕೆಗಳಲ್ಲಿ ಓದಿ ತಿಳಿದಿದ್ದೆನು. ವಿದ್ಯಾಭ್ಯಾಸ ಮಾಡುವಾಗ ಜೊತೆಗೇ ಇದ್ದು ಊಟಮಾಡಿ ಮಲಗುತ್ತಿದ್ದರೂ, ಅನಂತರ ನಮ್ಮ ನಮ್ಮ ಜೀವನ ವೃತ್ತಿ ಬೇರೆ ಬೇರೆಯಾಗಿ ದೂರವಾದೆವು. ಆದರೂ ಒಮ್ಮೆಮ್ಮೆ ಅವಕಾಶ ಸಿಕ್ಕಿ ಭೇಟಿಯಾದಾಗ ಸರಳ ಸೌಜನ್ಯದಿಂದ ಮಾತನಾಡಿಸುತ್ತಿದ್ದರು. ಪ್ರೀತಿ-ಸಂತೃಪ್ತಿ ಭಾವನೆ ಭೇಟಿಯ ಪ್ರಯೋಜನವಾಗಿತ್ತು.

ಪತ್ರಿಕೆಯಲ್ಲಿ ಬಂದ ಅವರ ಮೃತವಾರ್ತೆ ಓದಿ ಮಾನಸಿಕವಾಗಿ ಆಘಾತಗೊಂಡು ಕೆಲವಾರು ತಿಂಗಳು ಏನೋ ಅಮೂಲ್ಯವಾದದ್ದನ್ನು ಕಳೆದುಕೊಂಡಂತೆ ಮನಸ್ಸು ತಲ್ಲಣಿಸುತ್ತಿತ್ತು. ಈಗಲೂ ನೆನಸಿದಾಗ ಹಿಂದಲ ನೆನಪು ಸ್ಫುರಿತವಾಗಿ ಮನಸ್ಸು ಕದಡುತ್ತದೆ.

# ಕಲಾಭಿಮಾನಿ

**ತಿಟ್ಟೆ ಕೃಷ್ಣ ಅಯ್ಯಂಗಾರ್**

ಯಾವ ಮಹನೀಯರ ಸ್ಮರಣೆಯಿಂದ ಕರ್ಣಾಟಕದ ಕಲಾವಿದರಿಗೆ ಆನಂದ ವೆನಿಸುವುದೋ, ಸ್ಫೂರ್ತಿಯುಂಟಾಗುವುದೋ, ಉತ್ಸಾಹವು ಇಮ್ಮಡಿ ಆಗುವುದೋ ಅಂತಹ ಮಹನೀಯರಾಗಿದ್ದ ನರಸಿಂಹಮೂರ್ತಿಗಳ ಸವಿನೆನಪಿಗಾಗಿ ಈಗ್ಯೆ ಹತ್ತು ವರ್ಷಗಳ ಹಿಂದೆ 'ಕಲಾಭಾರತಿ' ಎಂಬ ಸಾಹಿತ್ಯ ಸಾಂಸ್ಕೃತಿಕ ಸಂಸ್ಥೆಯು ಬೆಂಗಳೂರಿನಲ್ಲಿ ಸ್ಥಾಪನೆಯಾಗಿ, ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದ ಕಲಾಸೇವೆಯಲ್ಲಿ ಹತ್ತು ವರ್ಷಗಳು ತುಂಬಿರುವುದು ಒಂದು ಸಂತೋಷದ ಸಂಗತಿಯೇ ಸರಿ.

ಹೀಗೆ ವಿಜಯೀ ವೈಭವ ದಶವರ್ಷಗಳ ಪೂರೈಕೆಯ ಸವಿನೆನಪಿಗಾಗಿ ಈ ಸಂಸ್ಥೆಯವರು ಸಿ. ನರಸಿಂಹಮೂರ್ತಿಗಳು ಹಾಗೂ ಸಾಹಿತ್ಯ ಸಾಂಸ್ಕೃತಿಕ ಕಲೆಗಳ ಬಗೆಗೆ ಒಂದು ಸ್ಮರಣ ಗ್ರಂಥವನ್ನು ಪ್ರಚುರಪಡಿಸಲು ಮನಸ್ಸು ಮಾಡಿರುವುದು ನಿಜವಾಗಿಯೂ ಒಂದು ಸ್ತುತ್ಯ ಕಾರ್ಯ.

ಸಿ. ನರಸಿಂಹಮೂರ್ತಿಗಳು ಆಗಿನ ಮೈಸೂರು ಸರ್ಕಾರದಲ್ಲಿ ಉನ್ನತ ಅಧಿಕಾರಿಗಳಾಗಿ ಮೈಸೂರಿನಲ್ಲಿದ್ದಾಗ, ಅವರ ಮನೆಯಲ್ಲಿ ಸಂಗೀತ ಉಪಾಧ್ಯಾಯನಾಗಿದ್ದುದರಿಂದ ಅವರಿಗೂ ನನಗೂ ಸಂಪರ್ಕ ನಿಕಟವಾಯಿತು. ಅದು ಅನೇಕ ವರ್ಷಗಳು ನಡೆದು ಅವರ ಅತ್ಯಮೂಲ್ಯ ಸದ್ಗುಣಗಳ ಪರಿಚಯ ನನಗುಂಟಾಗಲು ಕಾರಣವಾಯಿತು.

ಸಿ. ನರಸಿಂಹಮೂರ್ತಿಗಳು ಸ್ವಭಾವತಃ ಸಾತ್ವಿಕರು, ದಯಾವಂತರು, ಸರಳರು, ನಿಗರ್ವಿಗಳು, ಕಾರ್ಯದಕ್ಷರು, ಸತ್ಯನಿಷ್ಠರು ಮತ್ತು ಕಲಾಭಿಮಾನಿಗಳು. ಇವರ ಈ ಮಹಾಗುಣಗಳು ಸುಗಂಧವನ್ನು ಮುಟ್ಟಿದವರಿಗೆಲ್ಲಾ ಹತ್ತಿಕೊಂಡು ಅವರನ್ನೆಲ್ಲಾ ಸುಗಂಧಿಗಳನ್ನಾಗಿ ಮಾಡುವಂತೆ, ಇವರ ಇಡೀ ಕುಟುಂಬವರ್ಗದವರಿಗೆಲ್ಲಾ ಸೇರಿ ಇವರ ಮನೆಯೇ ಸುಗುಣಾಗಾರವೆನಿಸಿತ್ತು. ಅಷ್ಟೇ ಅಲ್ಲದೆ ಗಂಧರ್ವಕಲೆಯಾದ ಸಂಗೀತದಲ್ಲಿ ಮೂರ್ತಿಗಳಿಗೆ ಅಪಾರವಾದ ಆಸಕ್ತಿ ಅನುರಾಗಗಳಿದ್ದವು. ಇವರಿಗೆ ಸಂಗೀತ ವಿದ್ವಾಂಸರಲ್ಲಿ ವಿಶೇಷ ವಿಶ್ವಾಸವಿತ್ತು. ಅವರ ಪುರೋಭಿವೃದ್ಧಿಗೆ ಇವರು ಹಂಬಲಿಸುತ್ತಿದ್ದರು.

ಲೇಖಕನಾದ ನನಗೆ ಇವರು ಕನ್ನಡದಲ್ಲಿ ಹಲವಾರು ಕೀರ್ತನೆಗಳನ್ನು ರಚಿಸಿ, ಹಾಡುವಂತೆ ಒತ್ತಾಯಪೂರ್ವಕವಾಗಿ ಪ್ರೇರೇಪಿಸಿದ್ದರು. ಎಂದರೆ ಅವರಿಗೆ ಸಂಗೀತದ ಮೇಲೂ, ಸಂಗೀತ ಕಲೆಯ ಬೆಳಸಿನ ಮೇಲೂ ಹಾಗೂ ತಾಯ್ನುಡಿಯಾದ ಕನ್ನಡದ ಮೇಲೂ ಎಷ್ಟು ವಿಶ್ವಾಸವಿತ್ತು ಎಂಬುದು ವ್ಯಕ್ತವಾಗುತ್ತದಲ್ಲವೆ?

# ಭಾಷಣವೇ ಕಲೆ

**ರುಮಾಲೆ ಚನ್ನಬಸವಯ್ಯ**

---

1934ನೇ ಇಸವಿ. ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣಾಲಯದಲ್ಲಿ ತೈಲವರ್ಣ ಚಿತ್ರಕಲೆ ಅಭ್ಯಸಿಸಲು ಹೋಗಿದ್ದೆನು. ಕಾಲೇಜಿನ ನನ್ನ ಸ್ನೇಹಿತರು ಹೊರರಾಷ್ಟ್ರಗಳ ವಿಶ್ವವಿದ್ಯಾನಿಲಯಗಳ ಪ್ರತಿನಿಧಿಗಳು ಭಾಗವಹಿಸಿದ ಒಂದು ಚರ್ಚಾಕೂಟದ ಕಾರ್ಯಕ್ರಮಕ್ಕೆ ನನ್ನನ್ನು ಜಗನ್ಮೋಹನ ಬಂಗಲೆಗೆ, ರಾತ್ರಿ 8ಕ್ಕೆ ನಡೆದ ಕಾರ್ಯಕ್ರಮಕ್ಕೆ ಕರೆದುಕೊಂಡು ಹೋಗಿದ್ದರು. ಇಂಗ್ಲಿಷ್ ಭಾಷೆ ಮಾಧ್ಯಮದ ವಿಶ್ವವಿದ್ಯಾನಿಲಯಗಳ, ಹೊರ ರಾಷ್ಟ್ರಗಳ ಹಾಗೂ ಭಾರತದ ಪ್ರತಿನಿಧಿಗಳು ಭಾಗವಹಿಸಿದ್ದರು.

ನಮ್ಮ ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ಶ್ರೀ ನರಸಿಂಹಮೂರ್ತಿ ಮತ್ತು ಜಯಲಕ್ಷ್ಮಿ ವರದಾಚಾರ್ಯರು ಭಾಗವಹಿಸಿದ್ದರು.

ಶ್ರೀ ಸಿ. ನರಸಿಂಹಮೂರ್ತಿಗಳು ಭಾಷಣ ಕಲೆಯಲ್ಲಿ ಗಂಭೀರವಾದ, ಉತ್ಪ್ರೇಕ್ಷೆಯಿಲ್ಲದ, ವಿಷಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ಮನನ ಮಾಡಿಕೊಂಡು ಇಡೀ ಜನತೆಯ ಮೇಲೆ ಸರಳವಾಗಿ, ಸ್ಪಷ್ಟವಾಗಿ, ಅತಿಕಡಮೆ ಸಮಯದಲ್ಲಿ ನಿರೂಪಿಸಬಲ್ಲ ಭಾಷಾಕಲಾ ಪ್ರೌಢಿಮೆ ಪಡೆದವರೆಂಬುದು ಅಂದಿನ ಅವರ ಭಾಷಣದಿಂದ ಸರ್ವರಿಗೂ ವಿದಿತವಾಯಿತು.

ಅವರು ಆಡಳಿತಗಾರರಾಗದೇ ವಿಶ್ವವಿದ್ಯಾನಿಲಯದಲ್ಲಿ ಭಾಷಾ ಪಂಡಿತರಾಗಿ, ಬೋಧಕರಾಗಿದ್ದಿದ್ದಲ್ಲಿ ಆ ಕ್ಷೇತ್ರಕ್ಕೂ ತಿಲಕಪ್ರಾಯರಾಗಿ ರಾಷ್ಟ್ರದ ಗೌರವ ಎತ್ತಿ ಹಿಡಿಯುತ್ತಿದ್ದರು.

# ಶ್ರೀ ನರಸಿಂಹಮೂರ್ತಿಯವರು ಮತ್ತು ಪತ್ರಿಕೋದ್ಯಮ

**ಅಗರಂ ರಂಗಯ್ಯ**

---

ಸುಮಾರು ಅರ್ಧ ಶತಮಾನದ ಹಿಂದೆ ನನಗೆ ಶ್ರೀ ನರಸಿಂಹಮೂರ್ತಿಯವರ ಪರಿಚಯವಾಯಿತು. ನಮ್ಮ ಮುದ್ರಣಾಲಯದಲ್ಲಿ ತಾಯಿನಾಡು ಪತ್ರಿಕೆಯು ಆರಂಭವಾಗಿ ಕಾಸಿಗೊಂದು ಪ್ರತಿಯಂತೆ ಮಾರಾಟವಾಗುತ್ತಿತ್ತು. ಅದರ ಸಂಪಾದಕರಾದ ಶ್ರೀ ಪಿ. ಆರ್. ರಾಮಯ್ಯನವರಿಗೆ ಶ್ರೀ ನರಸಿಂಹಮೂರ್ತಿಯವರ ಭೇಟಿಯಾಗಿ ಅವರ ಪತ್ರಿಕೆಗೆ ನಗರದ ಸುದ್ದಿಗಳನ್ನು ಬರೆದುಕೊಡುವಂತೆ ನರಸಿಂಹಮೂರ್ತಿಯವರಿಗೆ ಅವರು ಹೇಳಿದರು. ಆಗ ಈ ವರದಿಗಾರರಿಗೆ ಸಂಪಾದಕರು ಕೊಡುತ್ತಿದ್ದ ಶುಲ್ಕ ತಿಂಗಳಿಗೆ 5 ರೂ. ಇದನ್ನು ನರಸಿಂಹಮೂರ್ತಿಯವರು ಮುಂದೆ ಅನೇಕ ಬಾರಿ ನೆನಸಿಕೊಂಡು ತಮ್ಮ ಭವಿಷ್ಯ ಜೀವನಕ್ಕೆ ಇದು ಒಳ್ಳೆ ಅಸ್ತಿಭಾರವನ್ನು ಹಾಕಿದುದಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಏಕೆಂದರೆ ಇದರಿಂದ ಅವರಿಗೆ ಸಮಾಜದ ಹಲವಾರು ವರ್ಗಗಳ ಪ್ರತಿಭಾವಂತ ಜನರ ಸಂಪರ್ಕವುಂಟಾಯಿತು ಮತ್ತು ಲೋಕಾನುಭವವು ಬಹಳಮಟ್ಟಿಗೆ ದೊರೆಯಿತು.

ಪ್ರತಿ ದಿನ ಅವರು ಪತ್ರಿಕೆಗೆ ಬರೆದು ತಂದುಕೊಡುತ್ತಿದ್ದ ಸುದ್ದಿಗಳ ವರದಿಗಳನ್ನು ವಿಮರ್ಶಿಸಿ, ತಿದ್ದಿ ಪತ್ರಿಕೆಗೆ ಸಿದ್ಧಮಾಡುವ ಕೆಲಸವನ್ನು ನನಗೆ ವಹಿಸಲಾಗಿತ್ತು. ಮೊದ-ಮೊದಲು ನರಸಿಂಹಮೂರ್ತಿಯವರು ಬರೆದು ತಂದ ಅನೇಕ ವಿಷಯಗಳನ್ನು ಪ್ರಾಮುಖ್ಯವಲ್ಲವೆಂದು ನಾನು ಹೊಡೆದು ಹಾಕುತ್ತಿದ್ದೆ. ಇನ್ನು ಕೆಲವಕ್ಕೆ ತಿದ್ದುಪಡಿಗಳನ್ನು ಮಾಡುತ್ತಿದ್ದೆ. ಮುಖ್ಯವಾಗಿ ವರದಿಗಳಿಗೆ ಆಕರ್ಷಣೀಯವಾದ ಶಿರೋನಾಮೆಯನ್ನು ಕೊಡುವುದು ನಮ್ಮ ಮುಖ್ಯ ಕೆಲಸವಾಗಿತ್ತು. ಈ ಎಲ್ಲ ಅಂಶಗಳ ಬಗ್ಗೆಯೂ ನರಸಿಂಹಮೂರ್ತಿಯವರು ಬಹುಬೇಗನೆ ಸ್ವಂತ ಪರಿಶ್ರಮದಿಂದ ಪರಿಷ್ಕರಣವನ್ನು ಹೊಂದಿದರು. ಕ್ರಮೇಣ ಅವರ ಬರವಣಿಗೆಗಳನ್ನು ನೇರವಾಗಿ ಪತ್ರಿಕೆಯಲ್ಲಿ ಮುದ್ರಣಕ್ಕೆ ಕೊಡುವಂತೆಯೂ ಆಯಿತು. ತಾಯಿನಾಡು ಪತ್ರಿಕೆಯ ಮೊಟ್ಟ ಮೊದಲನೆ ಗೌರವಾನ್ವಿತ ಸುದ್ದಿಗಾರರು ಶ್ರೀ ನರಸಿಂಹಮೂರ್ತಿಯವರೆಂದು ಧಾರಾಳವಾಗಿ ಹೇಳಬಹುದು.

ಶಿರೋನಾಮೆಗಳನ್ನು ಕೊಡುವುದರಲ್ಲಿ ಒಂದು ವಿಶೇಷ ಪ್ರಸಂಗ ನಡೆದುದನ್ನು ಶ್ರೀ ನರಸಿಂಹಮೂರ್ತಿಯವರು ಆಗಾಗ್ಗೆ ಒತ್ತಿ ಹೇಳುತ್ತಿದ್ದರು. ಆ ಸಮಯದಲ್ಲಿ ಮೈಸೂರು ನಗರದಲ್ಲಿ ಒಂದು ಕೋಲಾಹಲಕರವಾದ ಪ್ರಕರಣವು ನಡೆದಿತ್ತು. ಬೆಂಗಳೂರಿನ ದೇಶಮುಖಿ ಗೋವಿಂದರಾಯರೆಂಬುವರು ಮೈಸೂರಿನ ವಸುಂಧರಾದೇವಿ ಎಂಬಾಕೆಯನ್ನು ಮದುವೆಯಾದ ಸಂಬಂಧದಲ್ಲಿ ಇಲ್ಲಿನ ಮೆಜಿಸ್ಟ್ರೇಟರ

ಕೋರ್ಟಿನಲ್ಲಿ ಮೊಕದ್ದಮೆ ನಡೆಯುತ್ತಿತ್ತು. ಅದನ್ನು ನರಸಿಂಹಮೂರ್ತಿಯವರು ಪತ್ರಿಕೆಗೆ ವರದಿ ಮಾಡಿದಾಗ ಅವರು ಕೊಟ್ಟಿದ್ದ ಶಿರೋನಾಮೆಯು ಅಷ್ಟು ಆಕರ್ಷಣೀಯವಾಗಿರಲಿಲ್ಲ. ನಾನು ಅದನ್ನು 'ದೇಶಮುಖಿ ಗೋವಿಂದರಾಯರ ಗಾಂಧರ್ವ ವಿವಾಹ' ಎಂದು ಬರೆದೆ. ಅದು ಮುದ್ರಣವಾದ ದಿನ ಪತ್ರಿಕೆಗೆ ಬೇಡಿಕೆಯು ಬಹಳವಾಗಿತ್ತು. ಆ ಬದಲಾವಣೆಗಾಗಿ ಶ್ರೀ ನರಸಿಂಹಮೂರ್ತಿಯವರು ಬಹಳ ಸಂತೋಷಪಟ್ಟು ಆಗಾಗ್ಗೆ ಅದನ್ನು ಬಹಿರಂಗವಾಗಿ ಹೇಳುತ್ತಿದ್ದರು.

ಸುದ್ದಿಗಾರರ ಸಾಹಸ ಮತ್ತು ಕೌಶಲ್ಯದ ಬಗ್ಗೆ ನರಸಿಂಹಮೂರ್ತಿಯವರು ಅಭಿಮಾನದಿಂದ ಹೇಳುತ್ತಿದ್ದ ಮತ್ತೊಂದು ಮಾತು ಇದು. "ರವಿ ಕಾಣದ್ದನ್ನು ಕವಿ ಕಂಡ; ಕವಿ ಕಾಣದುದನ್ನು ಕರಸ್ಪಾಂಡೆಂಟ್ ಕಂಡ." ಈ ಮಾತಿನ ಔಚಿತ್ಯವನ್ನು ಇಂದಿಗೂ ಮುಂದೆಯೂ ಪತ್ರಿಕಾ ರಂಗದಲ್ಲಿ ನಾವು ನಿರಂತರವಾಗಿ ಕಾಣಬಹುದು. ಪತ್ರಿಕೋದ್ಯಮಿಯ ಸಾಹಸದಲ್ಲಿ ಕೆಲವು ನಿರಾಧಾರವೆಂದು ಕಂಡು ಬರಬಹುದಾದ ಊಹಾಪೋಹಗಳನ್ನು ಸಹ ಪ್ರಚಾರಪಡಿಸಿ ಅದರಿಂದ ವಾಸ್ತವಾಂಶಗಳನ್ನು ಹೊರಗೆಡುಹಲು ದಾರಿ ಮಾಡಿ ಕೊಡಲಾಗುತ್ತದೆ. ಈ ದೃಷ್ಟಿಯಿಂದ ಕವಿಯ ಕಲ್ಪನೆಗೂ ಮೀರಿದ ಹಲವು ಸಾಹಸದ ಭಾವನೆಗಳನ್ನು ಸುದ್ದಿಗಾರನು ಪ್ರಚುರಪಡಿಸಬೇಕಾಗುತ್ತದೆ. ಇದರಲ್ಲಿ ಅನೇಕ ನಿಪುಣರಾದ ಪತ್ರಿಕೋದ್ಯೋಗಿಗಳು ಯಶಸ್ವಿಯಾಗಿ ಸತ್ಯಾಂಶವನ್ನು ಹೊರಗೆಡುಹಲು ಸಮರ್ಥರಾಗಿದ್ದಾರೆ.

ಪತ್ರಿಕೋದ್ಯಮದಲ್ಲಿ ಈ ರೀತಿ ಪಡೆದ ಅನುಭವವು ಮುಂದೆ ನರಸಿಂಹಮೂರ್ತಿಯವರಿಗೆ ರಾಜ್ಯ ವಾರ್ತಾ ಅಧಿಕಾರಿಯಾಗಲು ಬಹಳ ಮಟ್ಟಿಗೆ ಸಹಾಯಕವಾಗಿರಬೇಕೆಂದು ಧಾರಾಳವಾಗಿ ಹೇಳಬಹುದು. ಅವರು ವಿಶೇಷವಾದ ಜ್ಞಾನಾರ್ಜನೆ, ಸಂಶೋಧನೆ ಮತ್ತು ನಿರೂಪಣೆಗಳಿಗೆ ಹೆಸರುವಾಸಿಯಾಗಿದ್ದರು. ಇದರಿಂದ ಕ್ರಮೇಣ ಅವರು ಅನೇಕ ಉನ್ನತ ಹುದ್ದೆಗಳನ್ನು ಅಲಂಕರಿಸಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು.

ಮೈಸೂರು ಡಿವಿಜನಲ್ ಕಮಿಷನರಾಗಿದ್ದಾಗ ಮಳೆ ಬೆಳೆಗಳಾಗದೆ ಭೀಕರ ಅಭಾವದ ಪರಿಸ್ಥಿತಿ ಉಂಟಾಗಿ ಕನ್ನಂಬಾಡಿ ಕಟ್ಟೆಯೂ ಸಹ ಒಣಗಿಹೋಗಿತ್ತು. ರೈತರುಗಳು ಬಹಳವಾಗಿ ಕಂಗಾಲಾಗಿದ್ದರು. ಹಿಂದೊಮ್ಮೆ ಇದೇ ರೀತಿ ಕ್ಷಾಮ ಪರಿಸ್ಥಿತಿ ಉಂಟಾಗಿದ್ದಾಗ ಅಂದಿನ ಅಧಿಕಾರಿಗಳು ಪಶ್ಚಿಮವಾಹಿನಿಯ ಪವಿತ್ರ ಕಾವೇರಿ ನದಿಯ ತೀರದಲ್ಲಿ ಹನ್ನೆರಡು ದಿನಗಳ ಕಾಲ ಪರ್ಜನ್ಯ ಜಪವೆಂಬ ಅಪೂರ್ವ ಅನುಷ್ಠಾನವನ್ನು ಪಂಡಿತೋತ್ತಮರಿಂದ ನೆರವೇರಿಸಲಾಗಿ ಕೂಡಲೇ ಧಾರಾಕಾರವಾದ ಮಳೆ ಬಂದು ಕನ್ನಂಬಾಡಿ ಕಟ್ಟೆಯು ಭರ್ತಿಯಾಗಿ ಮೈಸೂರು-ಮಂಡ್ಯ ಜಿಲ್ಲೆಗಳಲ್ಲಿ ಸಸ್ಯ ಸಂವೃದ್ಧಿಯುಂಟಾಗಿ ಅಲ್ಲಿನ ನಿವಾಸಿಗಳೆಲ್ಲರೂ ಆನಂದಭರಿತರಾಗಿದ್ದರು. ಅದೇ ರೀತಿ ತಮ್ಮ ಕಾಲದಲ್ಲೂ ಈ ಮಹಾ ಪ್ರಯೋಗವನ್ನು ನಡೆಸಬೇಕೆಂದು ಶ್ರೀ ನರಸಿಂಹ

ಮೂರ್ತಿಯವರು ಸಂಕಲ್ಪಿಸಿದರು. ಅದೇ ಪಶ್ಚಿಮವಾಹಿನಿಯ ಕಾವೇರಿ ನದಿ ತೀರದಲ್ಲಿ ವಿಪ್ರೋತ್ತಮರಿಂದ ಹನ್ನೆರಡು ದಿನಗಳ ಕಾಲ ಜಪ, ತಪ ಅನುಷ್ಠಾನ, ಅನ್ನದಾನ ಮುಂತಾದವುಗಳನ್ನು ನಡೆಸಲಾಯಿತು. ವೇದ ವಿದ್ವಾಂಸರಾದ ಆರು ಜನ ವಿಪ್ರೋತ್ತಮರು ಕಾವೇರಿ ನದಿಯಲ್ಲಿ ಸೊಂಟದವರೆಗೆ ನೀರಿನಲ್ಲಿ ನಿಂತು ಪ್ರತಿ ದಿನ ಐದಾರು ಗಂಟೆಗಳ ಕಾಲ ವೇದಘೋಷದಿಂದ ವರುಣ ದೇವನಿಗೆ ಮಳೆಗಾಗಿ ಮೊರೆಯಿಡುತ್ತಿದ್ದ ದೃಶ್ಯವು ಚಿತ್ತಾಕರ್ಷಕವಾಗಿತ್ತು. ಕಡೆಯ ದಿನ ಹೋಮ ಮತ್ತು ಪೂರ್ಣಾಹುತಿ ಆದ ಮೇಲೆ ಮಹಾಸಭೆ ನಡೆದು ಋತ್ವಿಜರೂ ಉಳಿದವರೂ ಅವರವರ ಊರುಗಳಿಗೆ ಹಿಂದಿರುಗುತ್ತಿದ್ದಂತೆಯೇ ಧಾರಾಕಾರವಾಗಿ ಮಳೆ ಬಂದು ಎಲ್ಲರಿಗೂ ವಿಶೇಷ ಸಮಾಧಾನವನ್ನು ಉಂಟುಮಾಡಿತು. ತಾವು ಕೈಗೊಂಡ ಈ ಪ್ರಯತ್ನವು ಯಶಸ್ವಿಯಾದುದಕ್ಕಾಗಿ ನರಸಿಂಹಮೂರ್ತಿಯವರು ಆನಂದಭರಿತರಾದರು.

ಕೆಲವು ದಿನಗಳಲ್ಲೇ ಕನ್ನಂಬಾಡಿ ಕಟ್ಟೆಯು ಭರ್ತಿಯಾಯಿತು. ಮೈಸೂರು-ಮಂಡ್ಯ ಜಿಲ್ಲೆಗಳಲ್ಲಿ ಒಣಗುತ್ತಿದ್ದ ಪೈರುಗಳೆಲ್ಲವೂ ಮತ್ತೆ ಚೇತರಿಸಿಕೊಂಡು ಧಾನ್ಯ ಸಂವೃದ್ಧಿಯುಂಟಾಯಿತು. ಈ ದೃಶ್ಯವನ್ನು ಕಣ್ಣಾರೆ ಕಂಡು ಮಹಾಜನರಿಗೆ ವರದಿ ಮಾಡಲು ನರಸಿಂಹಮೂರ್ತಿಯವರು ಪತ್ರಿಕೋದ್ಯಮಿಗಳ ವಿಶೇಷ ಪ್ರವಾಸವನ್ನು ಆ ಪ್ರದೇಶಗಳಲ್ಲಿ ಏರ್ಪಡಿಸಿ ರೈತರಿಗೂ ಜನಸಾಮಾನ್ಯರಿಗೂ ಉಂಟಾದ ಮಹತ್ ಪ್ರಯೋಜನವನ್ನು ಅರಿವು ಮಾಡಿಕೊಟ್ಟರು.

ನರಸಿಂಹಮೂರ್ತಿಯವರು ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರ ಅಚ್ಚುಮೆಚ್ಚಿನ ಶಿಷ್ಯರಲ್ಲಿ ಒಬ್ಬರು. ಅವರು ಸ್ಥಾಪಿಸಿದ ಅನಾಥಾಲಯದಲ್ಲಿ ನರಸಿಂಹ ಮೂರ್ತಿಯವರು ಅಶನ ವಸತಿಗಳನ್ನು ಹೊಂದಿ ಅವುಗಳ ಪೂರ್ಣ ಪ್ರಯೋಜನ ಪಡೆದು ತಮ್ಮ ವಿದ್ಯಾರ್ಥಿ ಜೀವನವನ್ನು ವಿಶೇಷ ಹಿರಿಮೆಯಿಂದ ಸಾಗಿಸಿದರು. ಎಲ್ಲ ಪರೀಕ್ಷೆಗಳಲ್ಲೂ ಅವರು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗುತ್ತಿದ್ದರು. ಲೇಖನ, ಭಾಷಣ ಮುಂತಾದ ಸ್ಪರ್ಧೆಗಳಲ್ಲಿ ವಿಶೇಷ ಪ್ರಶಸ್ತಿಯನ್ನು ಪಡೆಯುತ್ತಿದ್ದರು, ಅವರ ಅಪೂರ್ವವಾದ ಮೇಧಾಶಕ್ತಿ ಮತ್ತು ಪ್ರತಿಭೆಯನ್ನು ಮೆಚ್ಚಿ ಆಗ ಮೈಸೂರಿನ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಡಾ॥ ರಾಮಕೃಷ್ಣರಾಯರು ಅವರಿಗೆ ತಮ್ಮ ಕುಮಾರಿಯನ್ನು ಕೊಟ್ಟು ವಿವಾಹ ನಡೆಸಿದರು.

ಶ್ರೀ ನರಸಿಂಹಮೂರ್ತಿಯವರ ನಯ, ವಿನಯ, ಸೌಹಾರ್ದ, ಸರಳತೆ, ಪ್ರಸನ್ನತೆ, ಪರೋಪಕಾರ ಪ್ರವೃತ್ತಿ ಮುಂತಾದ ಸದ್ಗುಣಗಳು ಎಲ್ಲರಿಗೂ ಅನುಕರಣೀಯ ವಾಗಿವೆ. ಕೇವಲ ಬಡತನದಲ್ಲಿ ಬೆಳೆದು ತಮ್ಮ ಸ್ವಬುದ್ಧಿ ಮತ್ತು ಶಕ್ತಿಗಳಿಂದ ಅಪಾರವಾದ ಜ್ಞಾನಾರ್ಜನೆಯನ್ನೂ ಲೋಕಾನುಭವವನ್ನೂ ಪಡೆದು ಆದರ್ಶ ಅಧಿಕಾರಿಗಳಾಗಿದ್ದಾರೆ.

# ಹೃದಯ ಕೈಕೊಟ್ಟಿತು

ನಿರಂಜನ

ಎಂಥ ಸಾವು ಇಷ್ಟ ? ನೂರನೆಯ ವಯಸ್ಸಿನಲ್ಲಿ ಪ್ರಾಣೋತ್ಕ್ರಮಣವೆ ? ಇಳಿವಯಸ್ಸಿನಲ್ಲಿ ಬಂಧುಬಳಗದ ಮಧ್ಯೆ ಕುಳಿತಿದ್ದಂತೆಯೇ ಕೊನೆಯುಸಿರೆ ? ಅಥವಾ ನಡೆಯುತ್ತಲಿದ್ದಂತೆಯೇ ಒಂದೆಡೆ ಕುಸಿದು ವಿದಾಯವೇ ?

ನರಸಿಂಹಮೂರ್ತಿಯವರು ಕೊನೆಯ ದಿನವನ್ನು ಕಳೆದದ್ದು ಹೀಗೆ.

ಎಂದಿನಂತೆ ಕಚೇರಿಗೆ ಹೋದರು. ಮಗಳ ಮದುವೆ ಮುಗಿದು ಒಂದು ವಾರವೂ ಕಳೆದಿರಲಿಲ್ಲ. ಆ ಓಡಾಟದ ಬಳಲಿಕೆ ನೀಗಲು ರಜಾ ಪಡೆಯಬಹುದಾಗಿತ್ತು. ಆದರೆ ಮೂವತ್ತು ವರ್ಷಗಳ ಕಾಲ ವಿವಿಧ ಹುದ್ದೆಗಳಲ್ಲಿ ದುಡಿದ ಅಧಿಕಾರಿಗೆ ಅಂಥ ರಜೆ ಬೇಕು ಎನಿಸಿರಲಿಲ್ಲ.

ಕಚೇರಿಯ ಕೆಲಸ, ಅಲ್ಲಿಂದ ಮಂತ್ರಿಗಳಲ್ಲಿಗೆ, ಇನ್ನೊಂದು ಹೊರೆಗೆ ಸಂಬಂಧಿಸಿ ಮೂರು ಗಂಟೆಗಳ ಕಾಲ ಚರ್ಚೆ. ಮೂರು ಗಂಟೆಗೆ ಮನೆಗೆ ಬಂದರು, ಊಟಕ್ಕೆಂದು. ಒಡತಿ ಕೇಳಿದಳು : ವಿಶ್ರಾಂತಿ ತಗೋಬಾರದೆ ?

“ದೇಹಶ್ರಮ ಮಾಡ್ಕೋಬಾರದು, ಅಷ್ಟೆ, ಅಲ್ಲೇನು ಕುಣೀತೇನಾ ?” ನಗುತ್ತಾ ಮೂರೂವರೆಗೆ ಮತ್ತೇ ಕಚೇರಿಗೆ ಹೋದರು.

ಸಂಜೆ ಬಂದರು. ದುಡಿದರೂ ಪ್ರಸನ್ನ ಮುಖ, ಆ ದಿನ ಒಂದು ಮದುವೆ ಸಮಾರಂಭ. ಅಲ್ಲಿಗೆ ಹೋಗಿ, ಆಮಂತ್ರಿಸಿದವರನ್ನು ಹರ್ಷಿತರನ್ನಾಗಿ ಮಾಡಿ, ಉಡುಗೊರೆ ನೀಡಿ ವಾಪಸಾದರು.

ಅಳಿಯ ಕೈಹಿಡಿದವಳೊಡನೆ ತಮ್ಮೂರಿಗೆ ಇನ್ನೂ ಹೊರಟಿರಲಿಲ್ಲ. ಹರ್ಷದ ವಾತಾವರಣ ಮನೆಯಲ್ಲಿ.

ಎಲ್ಲರೂ ಊಟ ಮಾಡಿದರು. ನರಸಿಂಹಮೂರ್ತಿಯವರು ಎಲ್ಲರೊಡನೆಯೂ ನಗುತ್ತ ಮಾತನಾಡಿದರು.

“ಮಾವಿನ ಹಣ್ಣು ಹೆಚ್ಚು” ಎಂದರು ಒಡತಿಗೆ.

ಸುಸಂಸ್ಕೃತ ಸಂಸಾರದ ಸುಖ ಕಾಲಾಯಾಪನೆ ...

ಅಂದು ಮೇ 7. ನರಸಿಂಹಮೂರ್ತಿ ಹಾಗೂ ರಾಜೇಶ್ವರಿ ಅವರ ವಿವಾಹದ 31ನೇ ವರುಷದ ಹಿಂದಿನ ರಾತ್ರಿ. ಮಕ್ಕಳು ಮನೆಯಲ್ಲಿ ನೆಂಟರಿಷ್ಟರೊಂದಿಗೆ ಅವರಿಗೆ ಹಾರ ಹಾಕಿ ಸಂತೋಷಿಸಿದ್ದರು.

ನಡುವಿರುಳಿಗೆ ಮುಂಚೆ ನರಸಿಂಹಮೂರ್ತಿಯವರು ನಿದ್ದೆ ಹೋದರು.

...... ಬೆಳಗಾಯಿತು. ನರಸಿಂಹಮೂರ್ತಿಯವರು ಎದ್ದಿರಲಿಲ್ಲ. ಮುಂಜಾವದ ಕಾಫಿಗೆ ಹೊತ್ತಾಯಿತಲ್ಲ ಎಂದು ಮನೆಯವರು ಕೊಠಡಿಯ ಬಾಗಿಲು ತಳ್ಳಿದರು.

ಐವತ್ತಾರು ಐವತ್ತೇಳು ವರ್ಷಗಳ ಕಾಲ ತಮ್ಮ ಸಜ್ಜನಿಕೆಯಿಂದ, ಸಂಸ್ಕಾರದಿಂದ ಹಲವು ಸಹಸ್ರ ಹೃದಯಗಳನ್ನು ಗೆದ್ದಿದ್ದ ನರಸಿಂಹಮೂರ್ತಿಯವರು ಇರಲಿಲ್ಲ. ಸಮಾಜಕ್ಕಾಗಿ ಸದಾ ಮಿಡಿದ ಎದೆಗುಂಡಿಗೆ ಯಾವುದೋ ಅವೇಳೆಯಲ್ಲಿ ಕೆಲಸ ನಿಲ್ಲಿಸಿತ್ತು. ಅವರ ನೆನಪಿನ ದೇಹವಷ್ಟೇ ಭಂಗವಿಲ್ಲದ ನಿದ್ರೆಯಲ್ಲಿತ್ತು.

* * *

'ಬನಶಂಕರಿ' ಪ್ರಕಟವಾದಾಗ ನನಗೊಂದು ಕಾಗದ ಬಂತು. ಚಿ. ನ. ಮಂಗಳಾ ಅದನ್ನು ಬರೆದಿದ್ದರು. ಇವರು ಕತೆಗಾರ್ತಿ ರಾಜೇಶ್ವರಿಯವರ, ಮೈಸೂರು ಸಂಸ್ಥಾನದ ದಕ್ಷ ಅಧಿಕಾರಿ ನರಸಿಂಹಮೂರ್ತಿಯವರ ಮಗಳು ಎಂದು ನನಗೆ ತಿಳಿದದ್ದು ಅನಂತರ.

ನರಸಿಂಹಮೂರ್ತಿ ಜನಾನುರಾಗಿಯಾದ ಅಧಿಕಾರಿ ಮಾತ್ರವಲ್ಲ, ಸಾಹಿತ್ಯ ಪ್ರಿಯರು ಕೂಡ ಎಂದು ಕೇಳಿ ಸಂತೋಷಪಟ್ಟೆ.

ಆರು ವರ್ಷಗಳಿಗೆ ಹಿಂದೆ ಮೊದಲ ಬಾರಿ ಅವರನ್ನು ಕಂಡಾಗ ಅವರ ಸರಳ ವ್ಯಕ್ತಿತ್ವಕ್ಕೆ ಮಾರುಹೋದೆ.

'ಚಿಕವೀರ ರಾಜೇಂದ್ರ'ದ ಮುನ್ನುಡಿಯಲ್ಲಿ ಶ್ರೀನಿವಾಸರು ಕೃತಜ್ಞತೆ ಸಲ್ಲಿಸಿದ್ದ ನರಸಿಂಹಮೂರ್ತಿಯವರು "ನನಗಿಂತ ಕಿರಿಯರಿಲ್ಲ' ಎಂದಂತೆ ಅನಿಸಿತು.

* * *

ಮುಖದ ತೇಜಸ್ಸು, ಮೈಮಾಟ, ಅಗರ್ಭ ಸಿರಿವಂತರನ್ನು ನಾಚಿಸುವಂಥದು. ಬಾಲ್ಯದಲ್ಲಿ ಬಡತನದಲ್ಲಿ ವಿದ್ಯಾರ್ಜನೆ ಮಾಡಿದರು ಎಂದರೆ ನಂಬುವುದು ಕಷ್ಟ. ತಾತಯ್ಯನವರ ಅನಾಥಾಲಯದಲ್ಲಿ ಪ್ರತಿಭಾಶಾಲಿಯಾದ ವಿದ್ಯಾರ್ಥಿಯಾಗಿ ಇವರಿದ್ದರು ಎನ್ನುವುದು – ಇಂದಿನ ಮುಂದಿನ ಪೀಳಿಗೆಗೊಂದು ದಂತಕಥೆ.

ಸಾರಸ್ವತ ಲೋಕಕ್ಕೆ ವಿಸ್ಮಯವೆನಿಸಬಹುದಾದದ್ದು ಎಂದರೆ ಎಳೆ ಯೌವ್ವನವನ್ನು ಪತ್ರಿಕೋದ್ಯೋಗಿಯಾಗಿ ಇವರು ಕಳೆದರೆಂಬುದು. 'ಸಾಧ್ವಿ' 'ತಾಯಿನಾಡು'ಗಳಿಗೆ ಇವರು ವರದಿಗಾರರಾಗಿದ್ದರು, ಲೇಖನಗಳನ್ನು ಬರೆಯುತ್ತಿದ್ದರು.

ಮೈಸೂರು ಸಂಸ್ಥಾನದ ಅಧಿಕಾರಿಗಳ (M.C.S.) ಪರೀಕ್ಷೆಯಲ್ಲಿ ಮೊದಲಿಗರಾಗಿ ನರಸಿಂಹಮೂರ್ತಿಯವರು ಬದುಕಿನ ಸುದೀರ್ಘ ಅಧ್ಯಾಯವೊಂದನ್ನು ಆರಂಭಿಸಿದರು.

ನಿಷ್ಠೆ, ಶಿಸ್ತು, ನಿಸ್ಪೃಹತೆ – ಇವುಗಳನ್ನು ಜೀವನ ವಿಧಾನವಾಗಿ ರೂಪಿಸಿಕೊಂಡ ಅಲ್ಪ ಸಂಖ್ಯಾತರ ಸಾಲಿನಲ್ಲಿ ನರಸಿಂಹಮೂರ್ತಿ ಅಗ್ರಮಾನ್ಯರಾದರು.

ಈ ದುಡಿಮೆಗೆ ಅಂತಿಮ ಹಂತವಾಗಿ ಇನ್ನೇನು ಅವರು ರಾಜ್ಯದ ಚೀಫ್ ಸೆಕ್ರೆಟರಿ ಆಗಬೇಕು ಎನ್ನುವಷ್ಟರಲ್ಲೇ ಸಾವು ನಕ್ಕಿತು.

* * *

ಒಂದು ವಾರದ ಹಿಂದೆ ಮಗಳ ಮದುವೆಯ ಸಡಗರದಲ್ಲಿ ಊಟಕ್ಕೆ ಕುಳಿತಿದ್ದವರೆಲ್ಲರ ಬಳಿಗೆ ಬಂದು ನರಸಿಂಹಮೂರ್ತಿಯವರು ತಮ್ಮ ಸಹಜ ಆತ್ಮೀಯತೆಯಿಂದ ಮಾತಾಡಿದರು.

ಅವರ ಹೃದ್ರೋಗದ ಪ್ರಸ್ತಾಪ ಮಾಡಿದಾಗ, ಅವರನ್ನು ಇತ್ತೀಚೆಗೆ ನೋಡಿಕೊಳ್ಳುತ್ತಿದ್ದ ಡಾಕ್ಟರೆಂದರು.

"ಬಹಳ ಒಳ್ಳೆಯ ರೋಗಿ. ಇಲ್ಲದೆ ಹೋಗಿದ್ದರೆ ಹೋದ ವರ್ಷ ಎರಡನೆಯ ಸಲ ಅಟ್ಯಾಕ್ ಆದಾಗ ಅವರು ಉಳೀತಿರಲಿಲ್ಲ. ಶಿಸ್ತು, ಅಚ್ಚುಕಟ್ಟುತನ. ತಮ್ಮನ್ನು ತಾವು ಬಹಳ ಎಚ್ಚರಿಕೆಯಿಂದ ನೋಡ್ಕೋತಾರೆ."

ಅವರು ಹಾಗೆ ಹೇಳಿದ ಏಳೇ ದಿನಗಳಲ್ಲಿ ಹೃದಯ ಕೈಕೊಟ್ಟಿತು.

* * *

ಸುದ್ದಿ ಹಬ್ಬಿದಾಗ ಧಾವಿಸಿ ಬಂದವರು ಸಹಸ್ರಾರು ಜನ. ಅವರಿಂದೆಲ್ಲ ಸಾಲುಗಟ್ಟಿ ಅಂತಿಮ ಪ್ರಣಾಮ.

ವಯಸ್ಸಿನಲ್ಲಿ ನರಸಿಂಹಮೂರ್ತಿಯವರಿಗಿಂತ ಇಪ್ಪತ್ತು ವರ್ಷ ಹಿರಿಯರಾದ ಮಾಸ್ತಿ ಬಂದರು.

ಕೊಠಡಿಯಲ್ಲಿ ನಿಂತು ನಿಟ್ಟುಸಿರುಬಿಟ್ಟರು.

ತಲೆಯೆತ್ತಿ ಬಳಿಯಲ್ಲಿದ್ದ ಗೋಕಾಕರತ್ತ ನೋಡಿ, ಕ್ಷಣ ಏನೂ ಆಡದೆ, ಬಳಿಕ ಅಂದರು :

"This was too much for the heart."

* * *

ಸದ್ದಿಲ್ಲದೆ, ಯಾರಿಗೂ ತೊಂದರೆಯಾಗದಂತೆ, ನರಸಿಂಹಮೂರ್ತಿ ಹೊರಟು ಹೋಗಿದ್ದರು.

*(ನಿರಂಜನ ಅವರ 'ದಿನಚರಿ' ಕೃತಿಯಿಂದ)*

# ನನ್ನ ತಾಯಿ

ಚಿ. ನ. ಮಂಗಳಾ

---

ನನ್ನ ತಾಯಿಯ ಬಗ್ಗೆ ನನಗೆ ನೆನಪಿರುವ ಮಹತ್ವದ ಮೊದಲ ಚಿತ್ರ ...... ನಾನು ಬೆಂಗಳೂರಿನ ದೇಶಿಯ ವಿದ್ಯಾಶಾಲೆಯ ಮಾಧ್ಯಮಿಕ ಶಾಖೆಯ ವಿದ್ಯಾರ್ಥಿನಿಯಾಗಿದ್ದೆ. ನನ್ನ ತಾತ ಆಗ ತಾನೆ ನನ್ನನ್ನು ಶಾಲೆಗೆ ಸೇರಿಸಿದ್ದರು. ಶಾಲೆಯ ವಾರ್ಷಿಕೋತ್ಸವ ಬಂದಿತು. ನಾನೂ ಹಲವಾರು ಸ್ಪರ್ಧೆಗಳಿಗೆ ಸೇರಿಕೊಂಡಿದ್ದೆ. ನಾನು ಕಂಠ ಪಾಠ ಮಾಡಬೇಕಾಗಿದ್ದ ಹಲವಾರು ಸಾಲುಗಳನ್ನು ನನ್ನ ತಾಯಿ ಹೇಳಿಕೊಡಬೇಕಾಗಿತ್ತು. ಆದರೆ ಅಷ್ಟರಲ್ಲೇ ಅವರು ಅಸ್ವಸ್ಥರಾಗಿ ಆಸ್ಪತ್ರೆ ಸೇರಿದರು. ಚೆನ್ನಾಗಿ ಹೇಳಿ ಬಹುಮಾನ ಗಳಿಸಬೇಕೆಂದಿದ್ದ ನನಗೆ ಅಮ್ಮ ಮನೆಯಲ್ಲಿಲ್ಲದಿರುವುದು ಕಂಡು ಅಳುವೇ ಬಂದುಬಿಟ್ಟಿತು. ಆದರೆ ನನ್ನ ತಂದೆ ಸಮಾಧಾನ ಮಾಡಿದರು. ತಾವೇ ಹೇಳಿ ಕೊಡುವುದಾಗಿ ಹೇಳಿದರು. ಹೇಳಿಯೂ ಕೊಟ್ಟರು. ಸಂಜೆ ಅಮ್ಮನನ್ನು ನೋಡಲು ಆಸ್ಪತ್ರೆಗೆ ಕರೆದುಕೊಂಡು ಹೋದರು. ಮಾತಾಡಲೂ ಅಷ್ಟು ಶಕ್ತಿಯಿಲ್ಲದೆ ಹಾಸಿಗೆಯಲ್ಲಿ ಮಲಗಿದ್ದ ನನ್ನ ತಾಯಿ ಕೇಳಿದ ಮೊದಲ ಪ್ರಶ್ನೆ

"ಹಾಲು ಕುಡಿದೆಯಾ ?"

"ಹ್ಞು"

ಎರಡನೆಯ ಪ್ರಶ್ನೆ :

"ಕಾಂಪಿಟಿಷನ್ ಯಾವಾಗ ?"

"ಸೋಮವಾರ"

"ಸಾಲುಗಳನ್ನು ಗಟ್ಟಿ ಮಾಡಿ ಇಲ್ಲೇ ಬಂದು ಹೇಳು. ನಾನು ಹೇಳಿ ಕೊಡುತ್ತೀನಿ. ಚೆನ್ನಾಗಿ ಮಾಡು".

ನನಗಾದ ಸಂತೋಷ ಅಷ್ಟಿಷ್ಟಲ್ಲ. ಅಮ್ಮ ಆಸ್ಪತ್ರೆಯಲ್ಲಿ ಮಲಗೇ ನನಗೆ ಪದ್ಯಗಳನ್ನೂ ಕಥೆಗಳನ್ನೂ ಹೇಳಿಕೊಟ್ಟರು. ನನ್ನ ರಿಹರ್ಸಲ್ಸ್ ಎಲ್ಲ ಅಲ್ಲಿಯೆ. ವೈದ್ಯರೂ ಅದಕ್ಕೆ ಅಡ್ಡಿ ಬರಲಿಲ್ಲ. ನನಗೆ ಪ್ರತಿಯೊಂದು ಸ್ಪರ್ಧೆಯಲ್ಲೂ ಬಹುಮಾನ ಬಂದಿತು. ಅಷ್ಟು ಹೊತ್ತಿಗೆ ಅಮ್ಮ ಆಸ್ಪತ್ರೆಯಿಂದ ಮನೆಗೆ ಬಂದಿದ್ದರು.

ಮಕ್ಕಳು ಚೆನ್ನಾಗಿ ಕಲಿಯಬೇಕು, ಚೆನ್ನಾಗಿ ಬಾಳಬೇಕು ಎಂಬುದು ನನ್ನ ತಾಯಿಯ ಆಸೆ, ಎಲ್ಲ ತಾಯಿಯರ ಆಸೆಯ ಹಾಗೆ.

ಇದಕ್ಕಾಗಿ ನಮ್ಮ ತಾಯಿ ಪಡುತ್ತಿದ್ದ ಶ್ರಮ ಅಷ್ಟಿಷ್ಟಲ್ಲ.

ನಮ್ಮ ತಾಯಿಯ ಮನೆತನ ತುಂಬ ಸುಸಂಸ್ಕೃತ ವಿಚಾರವಂತ ಮನೆತನ. ನಮ್ಮ ತಾಯಿಯ ತಂದೆ ಮದರಾಸಿನ ಬಳಿಯಿರುವ ಲಾಲಾಪೇಟೆಯವರು, ಲಾಲಾಪೇಟೆ ರಾಮಕೃಷ್ಣರಾಯರು. ಮುಲಕುನಾಡು ತೆಲುಗರು. ತಾಯಿ ಚಿದಂಬರಮ್ಮ. ತಾತನಿಗೆ ಮದರಾಸು ವಿಶ್ವವಿದ್ಯಾಲಯದಿಂದ ವೈದ್ಯ ಪದವಿ. ನಮ್ಮ ಅಜ್ಜಿಯ ಮನೆತನ ಮೊದಲಿನಿಂದಲೂ ಆಧ್ಯಾತ್ಮ ಜೀವನಕ್ಕೆ ಹೆಸರಾದದ್ದು. ಕಾವ್ಯ ರಚನೆ ಆ ಮನೆತನದ ಹೆಣ್ಣು ಮಕ್ಕಳ ದಿನ ನಿತ್ಯದ ಕ್ರಿಯೆ, ನನ್ನ ತಾಯಿಯ ತಾಯಿ, ಅಜ್ಜಿ, ಮುತ್ತಜ್ಜಿಯರು ಹೇಳಿರುವ ಅನುಭಾವ ಗೀತೆಗಳು ಹಲವಾರು ಸಂಪುಟಗಳಾಗಬಹುದು. ಇದೆಲ್ಲ ತೆಲುಗಿನಲ್ಲಿದೆ. ನಮ್ಮ ತಾಯಿ ಇರುವವರೆಗೂ ನನಗೆ ಮನೆಯಲ್ಲಿ ಕನ್ನಡಕ್ಕಿಂತ ತೆಲುಗಿನದೇ ಹೆಚ್ಚು ಬಳಕೆ.

ನಮ್ಮ ತಾಯಿ ಹುಟ್ಟಿದ್ದು ಅಕ್ಟೋಬರ್ 4, 1916 ದುರ್ಗಾಷ್ಟಮಿಯಂದು. ನಮ್ಮ ತಾಯಿ ಒಬ್ಬಳೇ ಮಗಳಾದರೂ ಮನೆಯಲ್ಲಿ ಶಿಸ್ತಿಗೆ ತುಂಬ ಪ್ರಾಶಸ್ತ್ಯ. ಮನೆಗೆಲಸಕ್ಕೆ ಎಂದೂ ಹಿಂದು ಮುಂದು ನೋಡಿದವರಲ್ಲ ನಮ್ಮ ತಾಯಿ. ಮಕ್ಕಳು ಸ್ವಾವಲಂಬಿಗಳಾಗಬೇಕೆಂದು ನಮ್ಮ ತಂದೆ ತಾಯಿಯರ ಅಪೇಕ್ಷೆ. ಮನೆಯಲ್ಲಿ ನಮಗೆ ದೊರೆತ ಶಿಕ್ಷಣ ಇದೇ ಬಗೆಯದು.

ನಮ್ಮ ತಾಯಿಗೆ ಬಾಲ್ಯದಲ್ಲೇ ಮದುವೆಯಾಗಿ ಮದುವೆಯಾದ ಮರುಘಳಿಗೆಯಲ್ಲೇ ವೈಧವ್ಯ ಪ್ರಾಪ್ತವಾದರೂ ನಮ್ಮ ಅಜ್ಜಿ, ತಾತ ಅವರಿಗೆ ಎಲ್ಲ ಬಗೆಯ ಪ್ರೋತ್ಸಾಹ ಕೊಟ್ಟದ್ದು ನಮ್ಮ ಸಾಮಾಜಿಕ ಜೀವನದ ಅಂಧಕಾರದಲ್ಲಿ ಕಂಡು ಬಂದ ಆಶಾಕಿರಣ. ನಮ್ಮ ತಾಯಿಯ ವಿದ್ಯಾಭ್ಯಾಸ ಮುಂದುವರಿದದ್ದೇ ಅಲ್ಲದೆ ಅವರಿಗೆ ಸಾಹಿತ್ಯ, ಕಲೆ, ಸಂಗೀತ ಇವುಗಳಲ್ಲೂ ಪರಿಶ್ರಮ ಸಾಧ್ಯವಾಯಿತು. ನಮ್ಮ ತಾಯಿ ಪಿಟೀಲು ನುಡಿಸುತ್ತಿದ್ದರು. ಚಿತ್ರ ಕಲೆಯಲ್ಲಿ ಅವರಿಗೆ ಆಸಕ್ತಿ. ಕಾಗದದ ಮೇಲೆ ಬಟ್ಟೆಗಳ ಮೇಲೆ ಬಿಡಿಸಿರುವ ಚಿತ್ರಗಳು ಹಲವಾರು. ಕಸೂತಿ, ರಂಗವಲ್ಲಿ ಇವಂತೂ ದಿನದ ಕಾರ್ಯಕ್ರಮ. ವಿಜ್ಞಾನದ ವಿದ್ಯಾರ್ಥಿನಿಯಾಗಿದ್ದ ನಮ್ಮ ತಾಯಿಗೆ ಗಣಿತದಲ್ಲಿ ವಿಶೇಷ ಒಲವು. ಜೊತೆಗೆ ಅವರಿಗೆ ಹಿಂದಿ, ಕನ್ನಡ, ಸಂಸ್ಕೃತ, ತಮಿಳು, ಇಂಗ್ಲಿಷ್ ಇವುಗಳಲ್ಲಿ ಪಾಂಡಿತ್ಯವಿತ್ತು.

ನಮ್ಮ ತಾಯಿಗೆ ಆಟಗಳಲ್ಲೂ ಆಸಕ್ತಿ. ಬೆಂಗಳೂರಿನ ಮಹಿಳಾ ಸಮಾಜದಲ್ಲಿ ಟೆನಿಸ್ ಆಡುತ್ತಿದ್ದ ಮೊದಲಿಗರಲ್ಲಿ ಅವರೂ ಒಬ್ಬರು.

ತೋಟಗಾರಿಕೆ ಅವರಿಗೆ ತುಂಬ ಪ್ರಿಯವಾದ ಹವ್ಯಾಸ. ಗಿಡ ಮರ ಹೂ ಬಳ್ಳಿಗಳಿಲ್ಲದೆ ಅವರು ಒಂದು ನಿಮಿಷವೂ ಇರುತ್ತಿರಲಿಲ್ಲ. ನಮ್ಮ ತಾಯಿ ಇದ್ದ ಮನೆಗಳೆಲ್ಲ ನಂದನವನ. ಒಮ್ಮೊಮ್ಮೆ ಮಿತಿಯನ್ನೂ ಮೀರಿ ಬೆಳೆಯುತ್ತಿದ ಸಸ್ಯ ಸಂಪತ್ತನ್ನು ನೋಡಿ ಹಲವರು ನಮ್ಮ ಉದ್ಯಾನವನ್ನು ಪ್ರೀತಿಯಿಂದ 'ಗೊಂಡಾರಣ್ಯ' ಎನ್ನುತ್ತಿದ್ದುದೂ



ಉಂಟು. ಅಲ್ಲದೆ ನಮ್ಮ ಮನೆಯಲ್ಲಿ ಮಾವಿನ ಮರದಲ್ಲಿ ಸೀಬೇ ಹಣ್ಣು ಬಿಟ್ಟರೂ ಆಶ್ಚರ್ಯವಿಲ್ಲ ಎಂದು ಹಾಸ್ಯ ಮಾಡುತ್ತಿದ್ದುದುಂಟು.

ನಮ್ಮ ತಾಯಿಗೆ ಒಡವೆ, ಬಟ್ಟೆ ಬರೆಗಳಲ್ಲಿ ಎಂದೂ ಆಸಕ್ತಿಯಿರಲಿಲ್ಲ. ಅವರಿಗೆ ಪ್ರಿಯವಾದವು ಮೂರು. ಸಸ್ಯ ಸಂಪತ್ತು, ಸಾಹಿತ್ಯ ಪ್ರಪಂಚ, ಕಲಾ ಜಗತ್ತು. ಮನೆಯೇ ಅವರ ಕರ್ಮಭೂಮಿ. ಕಾರ್ಯಕ್ಷೇತ್ರ.

ನಮ್ಮ ತಾಯಿಗೆ ತಮ್ಮ ತಂದೆಯ ಮನೆಯಲ್ಲಿ ಎಷ್ಟು ಪ್ರೋತ್ಸಾಹ ದೊರೆಯಿತೋ ಮತ್ತೆ ವಿವಾಹವಾದ ಮೇಲೆ ನಮ್ಮ ತಂದೆಯ ಮನೆಯಲ್ಲಿ ಅಷ್ಟೇ ಪ್ರೋತ್ಸಾಹ ದೊರೆಯಿತು.

ನಮ್ಮ ತಂದೆತಾಯಿಯರ ಮದುವೆಯಾದದ್ದು ಬೆಂಗಳೂರಿನ ದಂಡು ಪ್ರದೇಶದ ಮದುವೆಗಳ ರಿಜಿಸ್ಟ್ರಾರರ ಕಚೇರಿಯಲ್ಲಿ – 8ನೇ ಮೇ 1937ರಂದು. ಈ ರಿಜಿಸ್ಟರ್ ವಿವಾಹ ನಡೆದದ್ದು ನಮ್ಮ ತಾಯಿಯ ತಾತ ಶ್ರೀ ಡಿ. ಎಂ. ಲಕ್ಷ್ಮಯ್ಯನವರು ನಮ್ಮ ತಾತನ ಷಡ್ಡಕ ಇಂಜನಿಯರಾಗಿದ್ದ ಹೆಬ್ಬಾಳ ಶ್ರೀನಿವಾಸ ಶಾಸ್ತ್ರಿಗಳು ನಮ್ಮ ತಾಯಿಯ ತಂದೆ ಇವರ ಸಮ್ಮುಖದಲ್ಲಿ.

ಸುಮಾರು ಅರವತ್ತೊಂದು ವರುಷಗಳ ಹಿಂದೆ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬವೊಂದರಲ್ಲಿ ನಡೆದ ಈ ವಿವಾಹ ಬರಿ ಕುಟುಂಬಕ್ಕೆ ಮಾತ್ರ ಸೀಮಿತವಾದ ಪ್ರಾಮುಖ್ಯತೆಯದಲ್ಲ. ಅದು ಒಂದು ಕ್ರಾಂತಿಕಾರಕವಾದ ಸಾಮಾಜಿಕ ಘಟನೆ. ಈ ವಿವಾಹಕ್ಕೆ ನಮ್ಮ ತಂದೆ ತಾಯಿಗಳ ಕುಟುಂಬದ ಹಿರಿಯರು ಒಪ್ಪಿದ್ದು ಇನ್ನೂ ಮಹತ್ತರ ಘಟನೆ.

ಈ ಘಟನೆಯಷ್ಟೇ ಸೋಜಿಗ ನಮ್ಮ ತಂದೆಯ ತಂದೆ, ಅಕ್ಕ–ತಂಗಿಯರು ನಮ್ಮ ತಾಯಿಯನ್ನು ಮನೆಯ ಸೊಸೆಯಾಗಿ ಒಪ್ಪಿಕೊಂಡಿದ್ದು. ವಿವಾಹದ ಆರತಕ್ಷತೆಯಲ್ಲಿ ಸಂಭ್ರಮದಿಂದ ಓಡಾಡಿದ ನಮ್ಮ ಸೋದರತ್ತೆಯರ ವಿಷಯವನ್ನು ಆರತಕ್ಷತೆಗೆ ಹೋಗಿದ್ದವರು ಈಗಲೂ ನನ್ನೊಡನೆ ಹೇಳುವುದುಂಟು.

ನಮ್ಮ ತಂದೆಯ ಕುಟುಂಬ ದೊಡ್ಡ ಕುಟುಂಬ. ನಮ್ಮ ತಾತ ಗನ್ನಿ ಅಗ್ರಹಾರದ ಚಿದಂಬರರಾಯರು. ನಮ್ಮ ತಾಯಿಯನ್ನು ಸ್ವಂತ ಮಗಳಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದರು. 'ರಾಜಮ್ಮ' ಅವರಿಗೆ ಮಗನಿಗಿಂತ ಹೆಚ್ಚು. ಮಗನ ಮದುವೆಯಾದ ಮೇಲೆ ನಮ್ಮ ತಾತ ಮಗನ ಜೊತೆಯಲ್ಲೇ ಇದ್ದರು. ನಮ್ಮ ತಂದೆಯ ತಾಯಿ ನಮ್ಮ ತಂದೆಯ ವಿವಾಹವಾಗುವುದಕ್ಕೆ ಮೊದಲೇ ಕಾಲವಾಗಿದ್ದರು. ಬಡತನ ಅವರನ್ನು ಕಾಡಿಸಿತ್ತು. ನಮ್ಮ ತಂದೆಯ ತಮ್ಮ, ಅಕ್ಕ ತಂಗಿಯರು, ನಮ್ಮ ತಾಯಿಯನ್ನು ನೋಡಿಕೊಂಡ ರೀತಿ ಈಗಲೂ ತೋರಿಸುತ್ತಿರುವ ಪ್ರೀತಿ, ವಿಶ್ವಾಸ ತುಂಬ

ಪ್ರಮುಖವಾದ ಮತ್ತೊಂದು ಸಾಮಾಜಿಕ ಮೌಲ್ಯ. ಈ ಆತ್ಮೀಯತೆ ಒಂದು ಐತಿಹಾಸಿಕ ದಾಖಲೆ. ನಾನು ಶಾಲೆಯಿಂದ ಬಂದ ಕೂಡಲೆ ತಾತ ಚಿದಂಬರಯ್ಯನವರು ನನ್ನನ್ನು ತಮ್ಮ ಬಳಿ ಕೂಡಿಸಿಕೊಂಡು ನನಗೆ ಶ್ಲೋಕಗಳನ್ನು ಹೇಳಿಕೊಡುತ್ತಿದ್ದರು. ಅಲ್ಲದೆ ನಾನು ಮಾಧ್ಯಮಿಕ ಶಾಲೆಯನ್ನು ದಾಟುವುದಕ್ಕೂ ಮೊದಲೇ ರಾಮಾಯಣ ಮಹಾಭಾರತದ ಕಥೆಗಳೆಲ್ಲವನ್ನೂ ಅವರು ಹೇಳಿದ್ದರು. ತಾತನಿಂದ ಕೇಳಿದ ಆ ಕಥೆಗಳನ್ನು ತಂದೆ ತಾಯಿಗಳಿಗೆ ಹೇಳುವುದು ನನಗೊಂದು ಆನಂದ.

ನಮ್ಮ ತಂದೆ ತಾಯಿ ಇಬ್ಬರನ್ನೂ ಸಮಾಜ ಒಲವಿನಿಂದ ಪರಿಗ್ರಹಿಸಿದ್ದು ಅರವತ್ತು ವರುಷಗಳ ಹಿಂದೆ ನಡೆದ 'ಪವಾಡ'.

ದೈವಭಕ್ತಿ, ಧರ್ಮಶ್ರದ್ಧೆ ಇವು ನಮ್ಮ ತಾಯಿಗೆ ವಂಶಪಾರಂಪರ್ಯವಾಗಿ ಬಂದದ್ದು. ವೈದ್ಯರಾಗಿದ್ದ ನನ್ನ ತಾತನವರಿಗೆ ದೀನದಲಿತರ ಬಗ್ಗೆ ತುಂಬ ಅನುಕಂಪ. ಹೆಚ್ಚಾಗಿ ಹಳ್ಳಿಗಳಲ್ಲೇ ಅವರ ಸರ್ಕಾರಿ ಸರ್ವಿಸ್ಸು. ಕಾಯಿಲೆಯವರು ಬಡವರಾಗಿದ್ದರೆ ಅವರಿಗೆ ಮನೆಯಿಂದ ಬಿಸಿನೀರು, ಊಟ, ಗಂಜಿ, ಹಣ್ಣುಹಂಪಲು. ಬಡ ವಿದ್ಯಾರ್ಥಿಗಳಿಗೆ ಮನೆಯಲ್ಲೇ ಊಟ ವಸತಿ. ಅಧ್ಯಾತ್ಮದಲ್ಲಿ ಆಸಕ್ತಿ. ಇವೆಲ್ಲ ಗುಣಗಳು ನಮ್ಮ ತಾಯಿಯಲ್ಲಿ ಮನೆ ಮಾಡಿದ್ದವು. ನಮ್ಮ ತಾಯಿಯ ಮನೆಯಲ್ಲಿ ಅಧ್ಯಾತ್ಮ ಜೀವನ ಬರಿ 'ಅಕೆಡೆಮಿಕ್' ಅಲ್ಲ. ಅದು ಅವರ ಬದುಕಿನ ರೀತಿ. ನನ್ನ ಅಜ್ಜಿ ಹೆಚ್ಚು ಓದಿದವರು ಅಲ್ಲದೆ ಇದ್ದರೂ ವೇದಾಂತದ ಪುಸ್ತಕಗಳನ್ನೂ ಸಾಹಿತ್ಯ ಕೃತಿಗಳನ್ನೂ ಓದಿ ನಮ್ಮೆಲ್ಲರ ಜೊತೆ ಚರ್ಚಿಸುತ್ತಿದ್ದರು. ನಮ್ಮ ಅಜ್ಜಿ ತಾತ ಅವರ ಬದುಕಿನಲ್ಲಿ ಶ್ರೀ ಶಂಕರಾಚಾರ್ಯರ ಅದ್ವೈತ ತತ್ವ ತುಂಬ ಪ್ರಭಾವ ಬೀರಿತ್ತು.

ಈ ವಾತಾವರಣದಲ್ಲಿ ಬೆಳೆದ ನಮ್ಮ ತಾಯಿ ಸಹಜವಾಗಿಯೇ ಮಾನವೀಯ ಮೌಲ್ಯಗಳನ್ನೂ ಅಧ್ಯಾತ್ಮ ತತ್ವವನ್ನೂ ಮೈಗೂಡಿಸಿಕೊಂಡಿದ್ದರು.

ದಾದಾ ಗೋಕಾಕ್ ಅವರ ಮೂಲಕ ನಮ್ಮ ತಂದೆ ತಾಯಿಯರಿಗೆ 1967ರಲ್ಲಿ ಶ್ರೀ ಸತ್ಯ ಸಾಯಿಬಾಬಾ ಅವರ ದರ್ಶನವಾಯಿತು. ಮೂರ್ತಿಯವರನ್ನು ಬಾಬಾ ಅಕ್ಕರೆಯಿಂದ ಆತ್ಮೀಯತೆಯಿಂದ ಕಂಡರು. ಶ್ರೀ ಸತ್ಯ ಸಾಯಿಬಾಬಾ ಮೂರ್ತಿ ಕುಟುಂಬದ ದಾರಿದೀಪವಾದರು. ಅಂತೆಯೇ ಸಾಯಿ ಅಧ್ಯಾತ್ಮ ಕೇಂದ್ರದ ಪೂಜ್ಯ ರಾಧಾಕೃಷ್ಣ ಸ್ವಾಮಿಗಳೂ ನಮ್ಮ ತಾಯಿಯವರನ್ನು ತುಂಬ ಆತ್ಮೀಯವಾಗಿ ಕಂಡರು.

ಬಾಬಾ ಅವರನ್ನು ದೈವವಾಗಿ ಸ್ವೀಕರಿಸಿದ ನಮ್ಮ ತಾಯಿ ಶುದ್ಧ ನಾಸ್ತಿಕವಾದಿಯಾದ ಗೋರಾ ಅವರನ್ನೂ ಅವರ ಕುಟುಂಬದವರನ್ನೂ ಅಷ್ಟೇ ಪ್ರೀತಿಯಿಂದ ಕಂಡರು. ಇದೂ ಒಂದು ಸೋಜಿಗವೆ. ಬೆಂಗಳೂರಿಗೆ ಬಂದಾಗ ಗೋರಾ ಅವರೂ ಅವರ ಪತ್ನಿ ಮಕ್ಕಳೂ ನಮ್ಮ ಮನೆಗೆ ಬಂದು ನಮ್ಮ ತಾಯಿಯ ಜೊತೆ

ಜೀವನದ ಹಲವಾರು ಸಮಸ್ಯೆಗಳನ್ನು ಚರ್ಚಿಸುತ್ತಿದ್ದರು. ಒಂದು ಬಗೆಯ ಆತ್ಮೀಯತೆ ನಮ್ಮ ಕುಟುಂಬಗಳ ನಡುವೆ ಬೆಳೆದು ಬಂದಿತ್ತು. ವೈಯಕ್ತಿಕ ನೀತಿ ನಿಷ್ಠೆ ನಡವಳಿಕೆಗಳು ಎಷ್ಟೇ ಬೇರೆ ಬೇರೆಯಾಗಲಿ ಪ್ರೀತಿ ವಿಶ್ವಾಸಕ್ಕೆ ಅವು ಅಡಚಣೆಯಲ್ಲ ಎಂಬುದನ್ನು ನಮ್ಮ ತಾಯಿ ಜೀವನದಲ್ಲಿ ಬರೀ ಆಡಿ ತೋರಿಸದೆ ಬಾಳಿ ತೋರಿಸಿದರು.

ನಮ್ಮ ತಾಯಿಯ ಬದುಕು ಸರಳ, ಸುಂದರ, ಸುಸಂಸ್ಕೃತ. ಅವರ ಬರಹವೂ ಅಷ್ಟೆ.

ನಮ್ಮ ತಾಯಿ ಎರಡು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಬೆಳದಿಂಗಳ ರಾತ್ರಿ', 'ಗುಲಾಬಿ ಹೂ'. ಒಂದು ಕಾದಂಬರಿಯನ್ನೂ ಬರೆದು ಮುಗಿಸುವುದರಲ್ಲಿದ್ದರು. ಹಲವಾರು ಬಿಡಿ ಗೀತೆಗಳನ್ನೂ ಲೇಖನಗಳನ್ನೂ ಬರೆದಿದ್ದಾರೆ. ತೆಲುಗಿನಲ್ಲಿ ಹಾಡುಗಳನ್ನು ರಚಿಸಿದ್ದಾರೆ. ಮೈಸೂರು, ಬೆಂಗಳೂರು, ಮದರಾಸಿನ ಬಾನುಲಿ ಕೇಂದ್ರಗಳಿಂದ ಅವರ ಹಲವಾರು ಕಥೆಗಳೂ ಹರಟೆಗಳು ಬಿತ್ತರಗೊಂಡಿವೆ.

ನಮ್ಮ ತಾಯಿ ಸ್ವಾತಂತ್ರಪೂರ್ವಕ್ಕೆ ಬರಹವನ್ನು ಆರಂಭಿಸಿದ ಕತೆಗಾರ್ತಿ. ಮನೆಯ ಮಾತು ತೆಲುಗಾದರೂ ಅವರ ಕನ್ನಡ ಸುಲಲಿತ. ಭಾಷೆ ಶೈಲಿ ನಿರೂಪಣೆ ಸರಳ. ವಿಷಯ ಎಲ್ಲಿಯೂ ಅತಿಯಾಗುವುದಿಲ್ಲ. ಅವರ ಎರಡು ಕಥಾ ಸಂಗ್ರಹಗಳೂ ಮೈಸೂರಿನ ಕಾವ್ಯಾಲಯದಿಂದ ಪ್ರಕಾಶಿತ. ಅವರ ಕಥೆಗಳ ಬಗ್ಗೆ ಹಿರಿಯ ವಿಮರ್ಶಕರ ಅಭಿಪ್ರಾಯಗಳಲ್ಲಿ ಕೆಲವನ್ನು ಇಲ್ಲಿ ಉದ್ಧರಿಸಿದ್ದೇನೆ.

ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ಕಾವ್ಯಾಲಯದ ಕೂಡಲಿ ಚಿದಂಬರಂ ಅವರಿಗೆ ಬರೆದ ಪತ್ರ "... ನೀವು ಪ್ರಕಟಿಸಿರುವ ಮಹಿಳಾ ಸಾಹಿತ್ಯವೆಲ್ಲವೂ ಚೆನ್ನಾಗಿದೆ. ತುಂಬ ಸುರುಚಿ ಸಂಸ್ಕೃತಿ ಸೌಜನ್ಯಗಳಿಂದ ಕೂಡಿದೆ. ನಾವು ಕಥೆ ಓದುವುದು ಕಥೆಗಾಗಿ, ಆದ್ದರಿಂದ ನೇರವಾಗಿ ಒಳ್ಳೆಯ ವಸ್ತುವನ್ನು ಸುಲಭ ಶೈಲಿಯಲ್ಲಿ ಬರೆದಿದ್ದರೆ ನನಗೆ ಓದಲು ತುಂಬ ಇಷ್ಟ. ವರ್ಣನೆ ಲಕ್ಷಣತಂತ್ರ ಚಿತ್ತ ವಿಶ್ಲೇಷಣೆ ಪಾತ್ರಪರಿಪೋಷಣೆ ಮುಂತಾದ ಏನೇನೋ ಸ್ವಯಂ ನಿರ್ಮಿತ ತೊಡಕುಗಳಲ್ಲಿ ಸಿಕ್ಕಿಕೊಳ್ಳದೆ ವಾಸ್ತವಿಕತೆಯಿಂದಲೂ ಸರಳತೆಯಿಂದಲೂ ಅನುಭವಕ್ಕೆ ಬಂದು, ನಮ್ಮ ಜೀವನವನ್ನು ತಿದ್ದಬಲ್ಲ ಬರವಣಿಗೆಗೆ ಹಿರಿಯ ಬೆಲೆ ಕೊಡಬೇಕು. ಏನೇ ಹೇಳಿದರೂ ಈ ಪ್ರಪಂಚದಲ್ಲಿ ಕಷ್ಟಸುಖಗಳಿಗೆ ಸಂಸಾರ ಮೂಲ. ಅದನ್ನು ಹಸನು ಮಾಡಬಲ್ಲ ಜನ ಧನ್ಯರು. 'ಬೆಳದಿಂಗಳ ರಾತ್ರಿ' ಕಾವ್ಯಮಯವಾಗಿದೆ. 'ಮಾಡಿದರೆ ಮನೆ' ಸಂಸಾರಕ್ಕೆ ಪ್ರತೀಕ. 'ಸೇರಿದ ಮನೆ'ಯ ಉತ್ತರ ಭಾಗವಿದ್ದಿದ್ದರೆ ಚೆನ್ನಾಗಿತ್ತು.

ಶ್ರೀಮತಿ ರಾಜೇಶ್ವರಿಯವರು ತಮ್ಮ ಗ್ರಂಥವನ್ನು ತಮ್ಮ ಸ್ವರ್ಗಸ್ಥರಾದ ತಾಯಿ ತಂದೆಗಳ ನೆನಪಿಗೆ ಅರ್ಪಿಸಿರುವುದನ್ನು ನೋಡಿ ನನಗೆ ತುಂಬ ಸಂತೋಷವಾಯಿತು.

ಡಾ॥ ರಾಮಕೃಷ್ಣರಾಯರನ್ನು ನಾನು ನೋಡಿದ್ದೆ. ಅವರು ಬದುಕಿದ್ದರೆ ಈ ಪುಸ್ತಕ ಓದಿ ಎಷ್ಟು ಸಂತೋಷಪಡುತ್ತಿದ್ದರೋ. ತಂದೆ ತಾಯಿಗಳು ತಮ್ಮ ಮಕ್ಕಳು – ಅದರಲ್ಲಿಯೂ ಹೆಣ್ಣುಮಕ್ಕಳು ಓದಿ ವಿದ್ಯಾವಂತರಾಗಿ ಸುಸಂಸ್ಕೃತರಾಗಿ ಹಾಲಿನಂಥ ಸಾಹಿತ್ಯ ಬರೆಯುವುದನ್ನು ಓದಿ ನೋಡಿ ಸಂತೋಷಪಡುವುದಕ್ಕೆ ಪುಣ್ಯ ಪಡೆದಿರಬೇಕು. ಪ್ರೀತಿಯ ಮಕ್ಕಳಿಗೂ ತಮ್ಮನ್ನು ಅಕ್ಕರೆಯಿಂದ ಸಲಹಿದ ತಾಯಿ ತಂದೆಗಳಿಗೆ ತಮ್ಮ ಸೃಷ್ಟಿಯನ್ನು ತೋರಿಸುವುದಕ್ಕಿಂತ ಏನು ಹೆಚ್ಚಿನ ಸುಖವಿದ್ದೀತು ? ಆದರೆ ಅದಕ್ಕೆಲ್ಲ ಪುಣ್ಯ ಬೇಕು. ಅದು ಎಲ್ಲಿ ಅಡಗಿದೆಯೋ ಅದನ್ನು ಹೇಗೆ ಸಂಪಾದಿಸಬೇಕೋ ! ...”

* * *

ನಮ್ಮ ತಾಯಿಯವರ ಮೊದಲ ಕಥಾ ಸಂಕಲನ ‘ಬೆಳದಿಂಗಳ ರಾತ್ರಿ’. ಹತ್ತೊಂಬತ್ತು ಕತೆಗಳ ಸಂಕಲನ. ಈ ಸಂಕಲನಕ್ಕೆ ಸೇಸೆ ನುಡಿಯನ್ನು ಬರೆದಿದ್ದಾರೆ ಪೂಜ್ಯ ಮಾಸ್ತಿ ಅವರು. ವಿ. ಸೀ. ಅವರು ಬರೆದಿರುವ ಮುನ್ನುಡಿಯಿಂದ ಕೆಲವು ಮಾತುಗಳು : “ ಶ್ರೀಮತಿ ರಾಜೇಶ್ವರಿ ಅವರು ಕೆಲವು ವರ್ಷಗಳಿಂದ ಆಗ ಈಗ ಹರಟೆಗಳನ್ನೂ, ಸಣ್ಣ ಕತೆಗಳನ್ನೂ ಬರೆಯುತ್ತಿದ್ದಾರೆ. ಒಳ್ಳೆಯ ಮನೆತನಕ್ಕೆ ಸೇರಿ, ಮರ್ಯಾದೆ, ದಾಕ್ಷಿಣ್ಯ ಅರಿತ ಅವರ ಮನಸ್ಸು ಲೋಕವನ್ನು ಮರ್ಯಾದೆಯಿಂದಲೇ ದಾಕ್ಷಿಣ್ಯದಿಂದಲೇ ಕಂಡಿತು. ಅವರ ಅನುಭವದ ವ್ಯಾಪ್ತಿ ಸಹಜವಾಗಿ ತನ್ನ ಸುತ್ತಮುತ್ತಿನ ಪ್ರಪಂಚಕ್ಕೆ ಸೀಮಿತವಾದದ್ದು. ಅವರು ಕಾಣುವ ಸುಖ, ದುಃಖ, ಸರಸ, ವಿರಸ, ವ್ಯಂಗ್ಯ, ಭ್ರಾಂತಿ, ವಿಷಮತೆ, ವಿಶದತೆ ವಿಸ್ತಾರ ಸಹಜವಾದವು; ದಿನ ಜೀವನದಲ್ಲಿ ಕಾಣುತ್ತಿರುವುವು. ಅವನ್ನೂ ಅವರು ಸಾಮರಸ್ಯದಿಂದ ನೋಡುತ್ತಾರೆ. ನೇರವಾಗಿ ಸರಳವಾಗಿ ಚಿತ್ರಿಸುತ್ತಾರೆ, ಬರೆಯುತ್ತಾರೆ. ಯಾವುದರಲ್ಲಿಯೂ ಅತಿಯಿಲ್ಲ. ಬೇಕೆಂದು ಆಳವನ್ನೊ, ಬೇರೆ ಪ್ರಮಾಣಗಳನ್ನೋ ಅತಿ ಮಾಡರು. ಬೇಕೆಂದು ಕರ್ಕಶತೆಯನ್ನೂ ವಿಕಟತೆಯನ್ನೂ ಬೆಳೆಸರು. ಸಂತೋಷವಿಲ್ಲದ ಜನ, ಏನು ಮಾಡಿದರೂ ದೊರೆತರೂ ಸಂತೋಷಪಡದೆ ವಿರಸವನ್ನೂ ಜೀವನದ ಕಹಿಗಳನ್ನೇ ಮೆರೆಸಿ ಕತೆಗಾರಿಕೆಯನ್ನು ಬಳಸುತ್ತಿರುವ ಕಾಲದಲ್ಲಿ ನೇರವಾಗಿ ಏನನ್ನಾದರೂ ಕಂಡೇವೇ ಎನ್ನಿಸುತ್ತದೆ. ಹಾಗೆಯೇ ಕತೆಯ ತಂತ್ರ ಅತಿ ಜಾಣವಾಗಿ ಕಲ್ಪನೆಯ ದುಃಸಾಹಸಗಳನ್ನು ಬೆಳೆಸದೆ ಕತೆಗಿಂತ ತಂತ್ರಭಾಗ, ಶೈಲಿಬೆಡಗು, ಅನುಚಿತ ಮನೋವಿಶ್ಲೇಷಣೆ ಬೇರೆಡೆ ಹೆಚ್ಚಾಗುವುದುಂಟು. ಅಂಥವುಗಳನ್ನು ಕಾಣಿಸುವ ಗೋಜಿಗೆ ಹೋಗದೆ ಮನಸ್ಸನ್ನೂ ಬರವಣಿಗೆಯನ್ನೂ ಕಾಪಾಡಿಕೊಂಡಿದ್ದಾರೆ ಇವರು. ಆ ಪ್ರಾಗಲ್ಭ್ಯದ ಬರವಣಿಗೆಯಲ್ಲಿ ಉಗ್ರತೆ, ಆವೇಶ, ತೀವ್ರವೇದನೆ, ಗಾಢ ಗೂಢ, ಪದರ ಇರುತ್ತವೆ. ಬೆರಗುಗೊಳಿಸಬಲ್ಲ ಕೌಶಲವೂ ಇರಬಲ್ಲದು. ಕೆಲವು ನಷ್ಟಗಳು ನಷ್ಟವಲ್ಲವೇನೋ. ಹೊಸ ಕಾಲದಲ್ಲಿ ಕತೆಗಾರರಿಗೆ ಪ್ರಿಯವಾದ ಕೆಲವು ವೃತ್ತಿಗಳನ್ನೂ ಇವರು ಆರಿಸಿಕೊಳ್ಳುವುದಿಲ್ಲ. ಆದ್ದರಿಂದ ಅಲ್ಲಿ ತರಬಹುದಾಗಿದ್ದ ರಂಗು ರೋಮಾಂಚಗಳನ್ನೂ ಸೆಳೆತಗಳನ್ನೂ ಈ ಕತೆಗಳಲ್ಲಿ ಕಾಣಲಾಗದು. ಇರುವುದು

ತಿಳಿಯಾಗಿ, ನಿಷ್ಕಪಟವಾಗಿ ಮರ್ಯಾದೆ ಮೀರದೆ ಇದೆ.''

ಜ್ಞಾನಪೀಠ ಪ್ರಶಸ್ತಿ ವಿಜೇತ ವಿನಾಯಕರ ಅಭಿಪ್ರಾಯ : "ಈ ಕಥಾ ಸಂಕಲನದ ದರ್ಶನ ಕೌಟುಂಬಿಕ ಜೀವನ ಸಮಾಜದಲ್ಲಿ ಹಿಂದು-ಮುಂದುವರಿಯುವ ರೀತಿಯನ್ನು ಕುರಿತದ್ದು. ಒಂದು ಉತ್ತಮ ಹೃದಯವಂತಿಕೆಯೂ ತಿಳುವಳಿಕೆಯೂ ಇಲ್ಲಿ ರಸವತ್ತಾಗಿ ಮೂಡಿಬಂದಿದೆ.

'ಅಜ್ಜಿಯ ಕತೆ', 'ಬೆಳದಿಂಗಳ ರಾತ್ರಿ' ಬಹಳ ಚೆನ್ನಾಗಿವೆ. ಅಜ್ಜಿಯ ಕತೆಯಲ್ಲಿ ಜಾನಪದ ಕಲ್ಪಕತೆಯು ಅರಳಿ ನಿಂತಿದೆ. ಎರಡನೆಯದರ ಮುಕ್ತಾಯ ಸ್ವಲ್ಪ ಕೃತ್ರಿಮವೆನಿಸುತ್ತದೆ.

ಆಸೆ-ನಿರಾಸೆ, ಸಿನಿಮಾಕ್ಕೆ ಸೇರಿದಳು, ಮಹಾಸತಿ, ಸೇರಿದ ಮನೆ, ನೆರೆಹೊರೆ, ಬಂಧಮುಕ್ತೆ ಇವುಗಳಲ್ಲಿಯ ರುದ್ರತೆ-ವಿಡಂಬನೆಗಳು ಹೃದಯಸ್ಪರ್ಶಿಯಾಗಿವೆ. ಆಸೆ ನಿರಾಸೆ ಕಾರ್ಮಿಕರ ಜೀವನವನ್ನು ಕುರಿತು ಬರೆದದ್ದು. ಸಂಗ್ರಹಕ್ಕೆ ಇದರಿಂದ ವೈವಿಧ್ಯತೆ ಬರುತ್ತದೆ.

ಉಳಿದ ಕತೆಗಳಲ್ಲಿ ವಿನೋದಕ್ಕೆ ಇಲ್ಲವೆ ಹಾಸ್ಯಮಯ ವಿಡಂಬನೆಗೆ ಪ್ರಧಾನತೆಯಿದೆ. 'ಕ್ಲಬ್‌ಡೆ'ದಲ್ಲಿ ಓ ಹೆನ್ರಿ ರೀತಿಯ ಅತಿಶಯೋಕ್ತಿಯಿದೆ.

ಬಂಧಮುಕ್ತೆ, ಸ್ಕೂಲ್‌ಡೇ, ಸೇರಿದ ಮನೆ ಇವು ಒಂದು ರೀತಿಯಿಂದ ಮುರುಟಿದಂತೆ ಸಂಕ್ಷಿಪ್ತವಾದರೆ ಕಾಲಹರಣ, ಕಲೆಗಿಂತ ನೀತಿಗೆ ಹೆಚ್ಚು ಪ್ರಾಧಾನ್ಯ ಕೊಟ್ಟಿದೆ. ಆದರೆ ತುಂಬಿದ ಕತೆಯಾಗಲಿ, ಕಿರಿಯದಿರಲಿ ಸಂಗ್ರಹದಲ್ಲೆಲ್ಲ ಒಂದು ವಿವೇಕ ಹಾಗೂ ಹೃದಯವಂತಿಕೆ ತುಂಬಿಕೊಂಡು ಜೀವಂತವಾದ ಕಲೆಯನ್ನು ಪ್ರಸ್ತಾಪಿಸಿದೆ."

* * *

ಸುಪ್ರಸಿದ್ಧ ವಿಮರ್ಶಕರಾದ ಶ್ರೀಯುತ ಕೆ. ನರಸಿಂಹಮೂರ್ತಿ ಅವರು ಕೃತಿಯ ಬಗ್ಗೆ ತಮ್ಮ ಆತ್ಮೀಯ ಕಾಗದ ಬರೆದರು.

''I thoroughly enjoyed reading these stories. The writing is full of promise. The style is unpretentious and realistic and there is an undercurrent of poetic feeling. The poetic impression is due to the image of our traditional conception of a housewife, happy loving and happily loved, that hovers like a hardly realizable dream over these rather sad pages. The stories strive towards an approximation to this ideal and so suggest it again and again. Typical of this trend is the most romantic tale of the volume, the

title story. The volume describes dangers from so many sides to the domestic felicity that its very precariousness adds enchantment to the ideal image of happy conjugal life. While the as-yet-inadequate technique calls for the description 'didactic' for such an array of 'object-lesson' situations, the writer's gracious personality casts over the entire volume a spell that is half poetic and that lends what life and reality the stories possess.

Stories that are almost successful are ಅಜ್ಜ ಹೇಳಿದ ಕತೆ, ಅವರು ಕಟ್ಟಿದ ಮನೆ, ಸ್ಕೂಲ್‌ಡೇ and ನೆರೆಹೊರೆ."

* * *

ಈ ಕೃತಿ ಪ್ರಕಟವಾದದ್ದು 1957ರಲ್ಲಿ. ಇದಾದ ಹನ್ನೊಂದು ವರುಷಗಳ ಮೇಲೆ ನಮ್ಮ ತಾಯಿಯ ಇನ್ನೊಂದು ಕಥಾ ಸಂಕಲನ 'ಗುಲಾಬಿ ಹೂ' ಕಾವ್ಯಾಲಯದಿಂದ ಪ್ರಕಟವಾಯಿತು. ಈ ಸಂಕಲನದಲ್ಲಿನ ಕತೆಗಳಲ್ಲಿ ಅವರು ಆರಿಸಿಕೊಂಡ ವಸ್ತು, ಶೈಲಿ, ನಿರೂಪಣೆ ಹೆಚ್ಚು ತೀವ್ರತೆಯನ್ನು ಪಡೆದವು. ಈ ಸಂಕಲನವೂ ಹಿಂದಿನಂತೆಯೇ ವಿಮರ್ಶಕರ ಮೆಚ್ಚುಗೆ ಪಡೆಯಿತು.

ಈ ಕೃತಿಗೆ ಮುನ್ನುಡಿ ಬರೆಯುತ್ತಾ ಡಾ|| ವಿ. ಕೃ. ಗೋಕಾಕರು "ಸುತ್ತಣ ಪ್ರಪಂಚವನ್ನು ಅನಾಸಕ್ತ ಆದರೆ ಸಾತ್ವಿಕ ಹಾಗೂ ಸತ್ವಯುತ ದೃಷ್ಟಿಯಿಂದ ನೋಡುವ ಪ್ರಜ್ಞೆ ಲೇಖಕಿಯರಿಗೆ ಇದೆ. ಅದನ್ನು ಉಚಿತವಾಗಿ ಸಾಹಿತ್ಯಕ್ಕೆ ತಿರುಗಿಸುವ ಕಲೆಯೂ ಅವರಿಗೆ ಸಾಧಿಸಿದೆ. 'ಯಾರ ಮಾತು ನಡೀತು', 'ಸಮಾಧಿ' ಮತ್ತು 'ಬೇಬಿ ಹುಟ್ಟಿದ ಹಬ್ಬ' ಇಲ್ಲಿಯ ಉತ್ತಮ ಕಥೆಗಳು. ಇವುಗಳಲ್ಲಿ ಅನುಭಾವ ಕಲಾವಂತಿಕೆಗಳು ಸಂಜೋಡಿಯಾಗಿ ಹೊಂದಿಕೊಂಡಿವೆ. 'ಸಮಾಧಿ'ಯಲ್ಲಿಯ ವಿಸ್ಮಯಕಾರಕ ಘಟನೆಯಿಂದಾಗಿ ಉದ್ದೀಪಿತವಾದ ಅದ್ಭುತ, 'ಯಾರ ಮಾತು ನಡೀತು' ಎಂಬಲ್ಲಿ ದಂಪತಿಗಳ ನಡುವಿನ ನ್ಯಾಯದ ಬಗ್ಗೆ ದೈವ ಕೊಟ್ಟ ತೀರ್ಪು, ಬೇಬಿಯಲ್ಲಿ ಆವಿದ್ಧ ಪ್ರಯೋಗದಿಂದ ಸುಕುಮಾರದೆಡೆಗೆ ಕತೆಯನ್ನು ತಿರುಗಿಸುವಲ್ಲಿಯ ಕಲಾವಂತಿಕೆ, ಇವೆಲ್ಲ ಮೆಚ್ಚತಕ್ಕಂತಹವು. ಇವುಗಳನ್ನು ಪೂರ್ಣ ಕೃತಿಗಳೆಂದು ಕರೆಯಬಹುದು" ಎಂದಿದ್ದಾರೆ.

ಈ ಬರಹದಲ್ಲಿ ಋಜುತ್ವವಿದೆ. ಸಾತ್ವಿಕ ಶಕ್ತಿಯಿದೆ. ಸಾಂಸಾರಿಕ ಜೀವನದ ಅರಿವಿನ ಜೊತೆಗೆ ಸಮಕಾಲೀನ ಪ್ರಜ್ಞೆಯೂ ಇದೆ. ಅಂತೆಯೇ ನಮ್ಮ ತಾಯಿಯ ಬರಹಕ್ಕೆ ಮಹಿಳೆಯರು ರಚಿಸಿರುವ ಕೃತಿಗಳಲ್ಲಿ ಮಾತ್ರವೇ ಅಲ್ಲದೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಒಂದು ಗಣನೀಯವಾದ ಸ್ಥಾನವಿದೆ.

# ಆದರ್ಶ ದಂಪತಿಗಳು

ಜಯಲಕ್ಷ್ಮಿ ಶ್ರೀನಿವಾಸನ್

1937ನೇ ಇಸವಿ. ಆಗ ಮೈಸೂರಿನ ಲಕ್ಷ್ಮೀಪುರದ ಬಡಾವಣೆಯಲ್ಲಿ ನಮ್ಮ ಮನೆ. ನನ್ನ ಪೂಜ್ಯ ಯಜಮಾನರು ಆಗ ಮೈಸೂರು ನಗರದ ಸ್ಪೆಷಲ್ ಮ್ಯಾಜಿಸ್ಟ್ರೇಟರಾಗಿದ್ದರು. ಆಗ ಶ್ರೀ ನರಸಿಂಹಮೂರ್ತಿಯವರು ಅದೇ ತಾನೇ ಮೈಸೂರಿನ ಸಿವಿಲ್ ಸರ್ವೀಸ್ (M.C.S.) ಪರೀಕ್ಷೆಯಲ್ಲಿ ಪ್ರಥಮಸ್ಥಾನದಲ್ಲಿ ತೇರ್ಗಡೆ ಹೊಂದಿದರೆಂದು ಹಿರಿಯರು, ಗೆಳೆಯರು, ನೆಂಟರು ಎಲ್ಲರೂ ಆನಂದದಲ್ಲಿ ಮಿಂದೆವು. ಕೆಲವೇ ದಿನಗಳಲ್ಲಿ ನನ್ನ ಪೂಜ್ಯ ತಂದೆಯವರ ಮಿತ್ರರ ಪುತ್ರಿಯೂ ನನ್ನ ನೆಚ್ಚಿನ ತಂಗಿ ಸೌ|| ಶಾಂತನ ಪ್ರಿಯಗೆಳತಿಯೂ ಆದ ಚೆಲುವೆ, ಸುಗುಣೆ, ಸುಕೋಮಲೆಯಾದ ಸೌಭಾಗ್ಯವತಿ ರಾಜೇಶ್ವರಿಯನ್ನು ತಂದುಕೊಂಡು ಯುವಕ ಸಿ. ನರಸಿಂಹಮೂರ್ತಿಯವರ ವಿವಾಹವು ನಿಷ್ಕರ್ಷೆಯಾಯಿತು.

ಬೆಂಗಳೂರಿನಲ್ಲಿ ಅವರಿಬ್ಬರ ಮದುವೆ ಜರುಗಿತೆನ್ನಿ. ಆ ಬಳಿಕ, ಮೈಸೂರಿನಲ್ಲಿ ನಮ್ಮ ಮನೆಯ ಪಕ್ಕದ ಮನೆಯಲ್ಲೇ ಆ ನೂತನ ದಂಪತಿಗಳಿಗೆ ಆರತಿ–ಅಕ್ಷತೆ ನಡೆಯಿತು. ಅದಕ್ಕೆ ನನ್ನ ಪತಿವರ್ಯರೂ, ನಾನು, ನಮ್ಮ ಹೆಣ್ಣುಮಕ್ಕಳು ಲೀಲಾ ಮತ್ತು ಮಾಲತಿಯ ಜೊತೆಗೆ ಹೋಗಿ ಹಿಗ್ಗಿ ಮೆರೆದುದು ಈಗಲೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಅಬ್ಬಾ ! ಎಂತಹ ಅಪೂರ್ವ ಜೋಡಿ ! ಆ ಬಳಿಕ ನವದಂಪತಿಗಳ ಅನುರಾಗದ ಅನ್ಯೋನ್ಯ ದಾಂಪತ್ಯ ಬಾಳ್ವೆಯನ್ನು ನಾನು ಕಂಡು ತಲೆದೂಗಿರುವೆನು. ಅವರುಗಳ ಭವಿಷ್ಯತ್ ಬಾಳಿನ ಚಿಹ್ನೆಯನ್ನು ಅಂದು (ಅವರುಗಳ ಆರತಿ–ಅಕ್ಷತೆಯ ಸಮಾರಂಭದ ಸಮಯದಲ್ಲಿ) ಆ ದಂಪತಿಗಳ ಮುಖಗಳ ವರ್ಚಸ್ಸಿನಲ್ಲೇ 'ಅಂಗೈಯ ನೆಲ್ಲೀಕಾಯಿ'ಯಂತೆ ಕಂಡೆನೆನ್ನಿ. ಆ ಬಳಿಕ, ಶ್ರೀ ಸಿ. ನರಸಿಂಹಮೂರ್ತಿಯವರು ಉನ್ನತ ಉದ್ಯೋಗಗಳನ್ನು ವಹಿಸಿ, ದಕ್ಷತೆಯಿಂದ ಕಾರ್ಯಗಳನ್ನು ನಿರ್ವಹಿಸುತ್ತಿರುವ ಬಗ್ಗೆ ಪ್ರಾಯದಲ್ಲೂ, ಔದ್ಯೋಗಿಕ ಕ್ಷೇತ್ರದಲ್ಲೂ ಅವರಿಗೆ ಹಿರಿಯರಾದ ನನ್ನ ಪೂಜ್ಯ ಪತಿವರ್ಯರು ಆಗಿಂದಾಗ್ಗೆ ನನ್ನಲ್ಲಿ ಹೊಗಳಿದಾಗ ಅವರ ಜಾಣ್ಮೆಯನ್ನೂ, ಶೀಲಸ್ವಭಾವವನ್ನೂ ಕುರಿತಾಗಿ ನಾವಿಬ್ಬರೂ ಮೆಚ್ಚಿಗೆ ಸೂಸುತ್ತಿದ್ದೆವು.

ರಾಜೇಶ್ವರಿಯೂ ಪತಿಗೆ ತಕ್ಕ ಪತ್ನಿ. ಸುಶೀಲೆ, ಸಾಧ್ವೀಮಣಿ. ಬಡಬಗ್ಗರಲ್ಲೂ, ವಯೋಧಿಕರಲ್ಲೂ ದಯೆತೋರಿ, ಪ್ರಿಯವಾಗಿ ನೆರವು ನೀಡುತ್ತಿದ್ದಳು. ಸ್ನೇಹಪರಳೂ ಹೌದು. ನನ್ನ ತಂಗಿ ಶಾಂತನಿಗಂತೂ ಆಕೆಯೆಂದರೆ ಪ್ರಾಣ. ಶಾಂತಳ ಪತಿವರ್ಯರು ಭಾರತ ಸರ್ಕಾರದ ವಿದೇಶ ವಿಭಾಗದಲ್ಲಿ (Indian Foreign Service) ಉದ್ಯೋಗಸ್ಥರಾದುದರಿಂದ ಶಾಂತ ಬಹುವಾಗಿ ವಿದೇಶಗಳಲ್ಲೇ ಸಂಚಾರ

ಮಾಡುತ್ತಿದ್ದಳು. ಮೂರು ಅಥವಾ ನಾಲ್ಕು ವರ್ಷಗಳಿಗೊಮ್ಮೆ ಅವಳು ಬೆಂಗಳೂರಿಗೆ ಬಂದಳೆಂದರೆ, ತನಗೆ ಸಮಯ ಸಿಕ್ಕಿದಾಗಲೆಲ್ಲಾ ರಾಜೇಶ್ವರಿಯನ್ನು ನೋಡಿಬರಲು ಹೋಗಿಬಿಡುವಳು. ಅವಳು ಇಲ್ಲಿಗೆ ಬಂದ ಆ ಅಲ್ಪ ಕಾಲದಲ್ಲಿ, ಅಕ್ಕ-ತಂಗಿಯರಾದ ನಾವುಗಳು ಅವಳನ್ನು ಕಾಣಲು ನಮ್ಮ ತೌರಿಗೆ ಹೋದರೆ ಶಾಂತ ಸಿಗುತ್ತಿರಲಿಲ್ಲ ! ನಮ್ಮಮ್ಮ "ಶಾಂತನೇ ? ರಾಜೇಶ್ವರಿಯ ಮನೆಗೆ ಹೋಗಿದ್ದಾಳೆ. ನಿಮಗೆಲ್ಲಿ ಸಿಗುವಳು" ಎಂದು ಹಾಸ್ಯವಾಗಿ ನುಡಿಯುತ್ತಿದ್ದರು ! ಈ ಒಂದು ವಾಕ್ಯದಲ್ಲೇ ರಾಜೇಶ್ವರಿ ನರಸಿಂಹಮೂರ್ತಿಯ ಹುಟ್ಟುಗುಣದ ರಹಸ್ಯವನ್ನು ವಾಚಕರು ತಿಳಿಯಬಹುದು. ಆಕೆಯೊಬ್ಬ ನುರಿತ ವಯಲಿನ್ ವಾದಕಿ. ನನ್ನ ತಂಗಿ ವೈಣಿಕ ಪ್ರವೀಣೆ. ಅವರಿಬ್ಬರೂ ಸಹಪಾಠಿಗಳು. ಅವರಿಬ್ಬರ ವಿದ್ಯಾಭ್ಯಾಸದ ಕಾಲದಲ್ಲಿ, ಅವರುಗಳ ಪ್ರೌಢ ವಿದ್ಯಾಶಾಲೆಯ ವಿಶೇಷ ಉತ್ಸವಗಳಲ್ಲಿ ರಾಜೇಶ್ವರಿಯ ವಯಲಿನ್ ಮತ್ತು ಶಾಂತನ ವೀಣಾವಾದನವಿಲ್ಲದೆ 'ಆರ್ಕೆಸ್ಟ್ರಾ' (Orchestra) ಶೋಭಿಸುತ್ತಿರಲಿಲ್ಲ. ಅಷ್ಟು ಮಾತ್ರವಲ್ಲದೆ ಆಕೆ ನುರಿತ ಲೇಖಕಿಯಾಗಿಯೂ ಇದ್ದಳು. ಸ್ವಂತ ಕಲ್ಪನೆಯ ಕತೆಗಳನ್ನೂ ಬರೆಯುತ್ತಿದ್ದಳು. ತೆಲುಗು, ಕನ್ನಡ ಎರಡೂ ಭಾಷೆಗಳಲ್ಲೂ ಬರೆದಿದ್ದಾಳೆ.

ಆ ಕುಟುಂಬದವರೆಲ್ಲರೂ ಆಯುರಾರೋಗ್ಯದಿಂದ ಬಹುಕಾಲ ಬಾಳಿ ಬದುಕಲೆಂದು ಭಗವಂತನನ್ನು ಬೇಡಿಕೊಳ್ಳುತ್ತೇನೆ.

ಶ್ರೀಮತಿ ಚಿ. ನ. ಮಂಗಳಾ ತನ್ನ ಮಾತಾಪಿತರ ನೆನಪಿನ ಚಿಹ್ನೆಯಾಗಿ 'ಕಲಾಭಾರತಿ' ಎಂಬ ಸಾಂಸ್ಕೃತಿಕ ಸಂಸ್ಥೆಯನ್ನು ಜನಸಾಮಾನ್ಯರ ಸಂತೋಷಕ್ಕಾಗಿ ನಡೆಸಿಕೊಂಡು ಬರುತ್ತಿದ್ದಾಳೆ. ನಿಜಕ್ಕೂ ಇದೊಂದು ಹೆಮ್ಮೆಯ ವಿಷಯ. ನಮ್ಮ ತಾಯ್ನಾಡ ಸಂಸ್ಕೃತಿಯು ದಿನೇ ದಿನೇ ಪ್ರವರ್ಧನಗೊಂಡು, ನಾಡು ಸೊಬಗಿನಿಂದ ಮೆರೆಯಲು ಇಂತಹ ಸಾಂಸ್ಕೃತಿಕ ಪೀಠಗಳು ಅತ್ಯವಶ್ಯಕ. ಈ ಕಲಾಪೀಠದ ಹತ್ತನೆಯ ವೈಭವದ ಉತ್ಸವಕ್ಕೆ ನನ್ನ ಶುಭಾಶಯಗಳು.

# ಪ್ರತಿಭಾವಂತ ದಂಪತಿಗಳು

**ಟಿ. ಸುನಂದಮ್ಮ**

---

ಮೈಸೂರು ಸಿವಿಲ್ ಸರ್ವೀಸಿನ ಹಿರಿಯ ಅಧಿಕಾರಿಯಾಗಿದ್ದ ನಮ್ಮ ತಂದೆಯವರಿಗೆ ಪ್ರತಿವರ್ಷ ಉತ್ತೀರ್ಣರಾದ ಅಭ್ಯರ್ಥಿಗಳ ಬಗೆಗೆ ಅಪಾರ ಅಭಿಮಾನ. ಆ ದಿನ ಕಚೇರಿಯಿಂದ ಬಂದವರು, "ಈ ಬಾರಿ ಎಂ.ಸಿ.ಎಸ್. ಮಾಡಿರುವವರಲ್ಲಿ ಸಿ. ನರಸಿಂಹಮೂರ್ತಿ ಎನ್ನುವ ಹುಡುಗ ಮೈಸೂರಿನವನು" ಎಂದು ಹೇಳಿದರು. ನಮ್ಮ ತಾಯಿಯವರು (ಮೈಸೂರಿನಲ್ಲಿ ಹುಟ್ಟಿ ಬೆಳೆದವರು) ಕೂಡಲೇ ಅವರದೆರಡು ಮಾತು ಸೇರಿಸಿದರು. "ಆ ಹುಡುಗನಿಗೆ ಕೊಟ್ಟಿರುವುದು ಡಾಕ್ಟರ್ ರಾಮಕೃಷ್ಣರಾಯರ ಮಗಳನ್ನು, ಅಣ್ಣಯ್ಯನಿಗೆ (ನಮ್ಮ ತಾತನವರು, ಅಂದರೆ ನಮ್ಮ ತಾಯಿಯವರ ತಂದೆ) ತುಂಬ ಬೇಕಾದವರು ರಾಮಕೃಷ್ಣರಾಯರು."

ಅನಂತರ ಕೆಲವೇ ತಿಂಗಳಲ್ಲಿ ನಡೆದ ಸರಕಾರೀ ಸಮಾರಂಭವೊಂದರಲ್ಲಿ ಶ್ರೀ ನರಸಿಂಹಮೂರ್ತಿಯವರನ್ನು ನಾನು ಮೊದಲಬಾರಿಗೆ ನೋಡಿದ್ದು; ಸ್ಫುರದ್ರೂಪಿ ಸುಂದರ ಯುವಕ; 'ಮನ್ಮಥ' ಎಂದರೂ ಸೂಕ್ತವೆನಿಸುವ ವ್ಯಕ್ತಿತ್ವ !

ನಾಲ್ಕೈದು ವರ್ಷಗಳ ಮೇಲೆ ಸಜ್ಜನರಾಯರ ಕಲ್ಯಾಣ ಮಂಟಪದಲ್ಲಿ ನನ್ನ ಮೈದುನನ ಮದುವೆ ನಡೆಯಿತು; ಸಂಜೆಯ ಆರತಕ್ಷತೆಗೆ ಬಂದಿದ್ದ ಎಳೆ ಮುತ್ತೈದೆಯನ್ನು ನಮ್ಮ ಬೀಗಿತಿ ಪರಿಚಯಿಸಿದರು – "ಇವರು ಮಿಸೆಸ್ ಸಿ. ನರಸಿಂಹಮೂರ್ತಿ."

ನನಗೆ ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿಯವರ ನಿಕಟ ಸಂಪರ್ಕವಾದದ್ದು ಅವರು ಬಸವನಗುಡಿ ಸ್ತ್ರೀ ಸಂಘದ ಸದಸ್ಯೆಯಾದ ಮೇಲೆ. ನಗೆಮೊಗದ ಸರಳ ಉಡಿಗೆ ತೊಡಿಗೆಯ, ನಿರಾಡಂಬರ ಗೃಹಿಣಿ. ಶ್ರೀಮಂತ ತಂದೆತಾಯಿಯರ ಏಕಮಾತ್ರ ಪುತ್ರಿ, ಸಿವಿಲ್ ಸರ್ವಿಸ್ ಉನ್ನತಾಧಿಕಾರಿಯ ಧರ್ಮಪತ್ನಿ; ಆದರೆ ಒಂದಿಷ್ಟೂ ಗರ್ವವಿಲ್ಲ ! ಬಹುಬೇಗ ಆತ್ಮೀಯತೆಯನ್ನು ಬೆಳೆಸಿಕೊಳ್ಳಬಲ್ಲ ಘನವ್ಯಕ್ತಿತ್ವ ಆಕೆಯದು.

ಬಸವನಗುಡಿ ಸ್ತ್ರೀ ಸಂಘದ ಚಟುವಟಿಕೆಗಳಲ್ಲಿ ನಾನು ಸಕ್ರಿಯ ಪಾತ್ರ ವಹಿಸುತ್ತಿದ್ದೆ. ಮಕ್ಕಳಿಗಾಗಿ 'ಬಾಲಸಂಘ' ಸ್ಥಾಪಿಸಿ, ಅವರಿಗೆ ತರಬೇತಿ ಕೊಟ್ಟು ಆಕಾಶವಾಣಿಯಲ್ಲಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದು, ಸಂಘದ ರಂಗಸ್ಥಳದ ಮೇಲೆ ಅವರಿಂದ ವಿವಿಧ ವಿನೋದಾವಳಿ ನಡೆಸುವುದು, ಇತ್ಯಾದಿ. ಬೆಣ್ಣೆ ಬೊಂಬೆಗಳಂತಿದ್ದ ಚಿ॥ ಚಂದ್ರು ಹಾಗೂ ಚಿ॥ ವಾಣಿಗೆ 'ಬಾಲಸಂಘ'ದಲ್ಲಿ ಪಾತ್ರ; ಸಕಾಲಕ್ಕೆ ಮಕ್ಕಳನ್ನು ಕರೆತರುತ್ತಿದ್ದವರು ತಾಯಿ ಶ್ರೀಮತಿ ರಾಜೇಶ್ವರಿ.

ನಗೆನಾಟಕಗಳನ್ನು ಬರೆದು ಸಂಘದ ವಾರ್ಷಿಕೋತ್ಸವದಲ್ಲಿ ಸದಸ್ಯೆಯರಿಂದ ಪ್ರದರ್ಶಿಸುವ ಪರಿಪಾಠ ಹದಿನೈದು ವರ್ಷಗಳ ಕಾಲ ನನ್ನದಾಗಿತ್ತು. "ಮಾತು ಮನೆ ಕೆಡಿಸಿತು" ಕಿರುನಾಟಕದಲ್ಲಿ ಶ್ರೀಮತಿ ರಾಜೇಶ್ವರಿಯದು ಮುಖ್ಯ ಪಾತ್ರ. ಮಿಕ್ಕ ಪಾತ್ರಧಾರಿಗಳು 'ಕಪ್ಪೆ ತಕ್ಕಡಿಗೆ ಹಾಕಿದಂತೆ' ರಿಹರ್ಸಲ್‌ಗೆ ಬಂದರೆ, ಹತ್ತು ನಿಮಿಷ ಮೊದಲಾಗಿ ಬರುತ್ತಿದ್ದರು, ಶ್ರೀಮತಿ ರಾಜೇಶ್ವರಿ. ಆಗ ಅವರು ವಾಸಿಸುತ್ತಿದ್ದುದು ಬಸವನಗುಡಿಯಲ್ಲಿದ್ದ ನಮ್ಮ ತಾತನವರ ಮನೆಯಲ್ಲಿ. (ಈಗಿನ 'ದ್ವಾರಕಾನಾಥ ಭವನ'.)

ನಾಟಕದ ಅಭ್ಯಾಸದ ಒಂದು ಘಟ್ಟದಲ್ಲಿ ಶ್ರೀಮತಿ ರಾಜೇಶ್ವರಿಯವರು ತುಂಬ ನಗುತ್ತಿದ್ದರು; ಮೂರು ನಾಲ್ಕು ದಿನಗಳ ನಂತರ ಕುತೂಹಲದಿಂದ ಕಾರಣ ಕೇಳಿದೆ. ಅಲ್ಲಿ ಬರುವ ಒಂದು ಪದದ ದ್ವಂದ್ವಾರ್ಥವನ್ನು ಅವರು ತೋರಿಸಿಕೊಟ್ಟಾಗ ಅವರ ಚುರುಕು ಮಾತಿಗೆ ಮೆಚ್ಚಿದೆ. (ಅಪಾರ್ಥಕ್ಕೆ ಎಡೆ ಕೊಡಬಹುದಾದ ಆ ಪದವನ್ನು ಬದಲಾಯಿಸಿದೆನೆಂದು ಹೇಳಬೇಕಾಗಿಲ್ಲ !)

ಲಾಲ್‌ಬಾಗ್‌ನ ಚಿನ್ನದ ಹಬ್ಬದ ಭವನದಲ್ಲಿ ಎರಡನೆಯ ಮಗಳು ಕುಮಾರಿ ಲಕ್ಷ್ಮಿಯ ಕಲ್ಯಾಣದ ಆರತಕ್ಷತೆ ಏರ್ಪಡಿಸಿ, ಬಂಧುಮಿತ್ರರನ್ನು ಆದರದಿಂದ ಸ್ವಾಗತಿಸಿದ ಶ್ರೀ ಸಿ. ನರಸಿಂಹಮೂರ್ತಿಯವರನ್ನು ಒಂದು ವಾರದಲ್ಲೇ ಮೃತ್ಯುದೇವತೆ ಸ್ವಾಗತಿಸುವಳೆಂದು ಯಾರ ಕನಸು ಮನಸಿನಲ್ಲೂ ಇರಲಿಲ್ಲ.

ಪತಿವಿಯೋಗ ಶ್ರೀಮತಿ ರಾಜೇಶ್ವರಿಗೆ ಅದೆಂಥ ಆಘಾತವಾಯಿತೋ ! ಕೆಲವೇ ವರ್ಷಗಳಲ್ಲಿ ಆತನನ್ನು ಸೇರಿಕೊಂಡುಬಿಟ್ಟರು !

ಶ್ರೀ ನರಸಿಂಹಮೂರ್ತಿಯವರ ಆಡಳಿತ ದಕ್ಷತೆ ಅಧಿಕಾರವರ್ಗದವರಿಗೆಲ್ಲಾ ವೇದ್ಯವಾಗಿತ್ತು. ಶ್ರೀಮತಿ ರಾಜೇಶ್ವರಿ ಆದರ್ಶ ಗೃಹಿಣಿ ಹಾಗೂ ಸಾಹಿತಿ; ಅವರು ಬರೆದಿರುವ ಸಣ್ಣಕತೆಗಳು ಬಾಳಿನ ಆಳ ಅನುಭವದ ಪ್ರತಿಬಿಂಬಗಳು. ಸಂಸಾರ ನಿರ್ವಹಣೆಯ ಭಾರ ಕಡಿಮೆಯಾಗುವವರೆಗೆ ಅವರ ಆಯುಷ್ಯ ಇದ್ದಿದ್ದರೆ, ಇನ್ನೂ ಹೆಚ್ಚಿನ ಸಾಹಿತ್ಯ ಸೇವೆಯನ್ನು ಅವರಿಂದ ನಿಜಕ್ಕೂ ನಿರೀಕ್ಷಿಸಬಹುದಾಗಿತ್ತು !

ಈ ಪ್ರತಿಭಾವಂತ ದಂಪತಿಗಳ ನೆನಪಾಗಿ ಹಿರಿಯ ಮಗಳು ಶ್ರೀಮತಿ ಚಿ. ನ. ಮಂಗಳಾ ಸ್ಥಾಪಿಸಿರುವ 'ಕಲಾಭಾರತಿ' ಸೂಕ್ತವಾದ ಕಾಣಿಕೆ.

# ನನ್ನ ಪೂರ್ವಜರು

ಚಿ. ನ. ಮಂಗಳಾ

---

"ಗಿಡ್ಡೇಗೌಡರ ಮಗ ಗಿಡ್ಡೇಗೌಡರಿಗೆ, ಗನ್ನಿ ಅಗ್ರಹಾರ, ನುಗ್ಗೇಹಳ್ಳಿ ಹೋಬಳಿ, ಚೆನ್ನರಾಯಪಟ್ಟಣ ತಾಲೂಕು, ಹಾಸನ ಡಿಸ್ಟ್ರಿಕ್ಟ್" – ನಮ್ಮ ತಾತ (ನಮ್ಮ ತಂದೆಯ ತಂದೆ) ಶ್ರೀ ಎ. ಚಿದಂಬರಯ್ಯನವರು ನನ್ನ ಹತ್ತಿರ 'ಗಿಡ್ಡೇಗೌಡರ ಮಗ ಗಿಡ್ಡೇಗೌಡರಿಗೆ' ಎಂದು ಪೋಸ್ಟುಕಾರ್ಡಿನಲ್ಲಿ ಆಗಾಗ ಪತ್ರ ಬರೆಸುತ್ತಿದ್ದರು – ಉಭಯ ಕುಶಲೋಪರಿ ಜೊತೆಗೆ ಏನೋ ಸಣ್ಣಪುಟ್ಟ ಜಮೀನಿನ ವಿಷಯ. ನಮ್ಮ ತಾತನವರ ಹೆಸರಿನ ಹಿಂದಿರುವ ಇನಿಷಿಯಲ್ಸ್ 'ಎ' ಎಂದರೆ ಅಗ್ರಹಾರ. 'ಅಗ್ರಹಾರ' ಬ್ರಾಹ್ಮಣ ಕುಟುಂಬದವರಿಗೆ ಅರಸರು ಮೊದಲಾದವರಿಂದ ಅವರ ಪೋಷಣೆಗಾಗಿ ದಾನವಾಗಿ ಬಂದ ಭೂಮಿ. ಇಂತಹ ಒಂದು ಪುಟ್ಟ ಅಗ್ರಹಾರ ನಮ್ಮ ತಾತನವರ ಗ್ರಾಮ. ನಮ್ಮ ತಂದೆ ಆ ಗ್ರಾಮದಲ್ಲಿ ನೆಲೆಸಲಿಲ್ಲವಾದ್ದರಿಂದ ಅವರು ತಮ್ಮ ಹೆಸರಿನ ಹಿಂದೆ ಇನಿಷಿಯಲ್ಸ್ ಆಗಿ ಅವರ ತಂದೆಯವರ ಹೆಸರಿನ ಮೊದಲ ಅಕ್ಷರವನ್ನು ಮಾತ್ರ ಹಾಕಿ ಸಿ. ನರಸಿಂಹಮೂರ್ತಿ ಆದರು. ಆ ಅಗ್ರಹಾರಕ್ಕೆ 'ಗನ್ನಿ ಅಗ್ರಹಾರ' ಎಂದು ಏಕೆ ಹೆಸರು ಬಂದಿತೋ ನನಗೆ ತಿಳಿಯದು. ನಮ್ಮ ತಾತ ಬದುಕಿರುವಾಗ ನಾನು ಅದನ್ನು ತಿಳಿದುಕೊಳ್ಳಲು ಹೋಗಲಿಲ್ಲ. ತೀರ ಇತ್ತೀಚೆಗೆ 1992ರಲ್ಲಿ ಇದ್ದಕ್ಕಿದ್ದಂತೆ ನನಗೆ ನಮ್ಮ ತಾತನವರ ಗ್ರಾಮಕ್ಕೆ ಹೋಗಿ ಅದು ಹೇಗಿದೆಯೋ ನೋಡಿ ಬರಬೇಕೆನಿಸಿತು. ನನಗೆ ಅಲ್ಲಿ ಯಾರ ಪರಿಚಯವೂ ಇರಲಿಲ್ಲ. ಆದರೆ 'ಗಿಡ್ಡೇಗೌಡರು' ಎನ್ನುವ ಹೆಸರನ್ನು ಬಿಟ್ಟರೆ ನನಗೆ ತಿಳಿದಿದ್ದ ಇನ್ನೊಂದೆರಡು ಹೆಸರುಗಳೆಂದರೆ ಆ ಗ್ರಾಮದ ಪುರೋಹಿತರು ದೇವರಭಟ್ಟರು. ಶ್ಯಾನುಭೋಗರು ಅಶ್ವತ್ಥನಾರಾಯಣ ಅಷ್ಟೆ. ಅವರೆಲ್ಲ ಅಲ್ಲೇ ಇದ್ದಾರೆಯೋ, ಇಲ್ಲವೋ ಅದೂ ಅಲ್ಲದೆ ಆ ಗ್ರಾಮ ಎಲ್ಲಿದೆಯೋ ತಿಳಿದಿರಲಿಲ್ಲ. ನಮ್ಮ ತಾತ ಒಂದು ಸಲ ಅಲ್ಲಿನ ಗ್ರಾಮದೇವತೆಗೆ ಶ್ರಾವಣ ಮಾಸದಲ್ಲಿ ಒಂದು ಸೀರೆ ಕುಪ್ಪುಸ ಕಳುಹಿಸಬೇಕೆಂದು ಹೇಳಿದರು. ಆ ನಂತರ ಪ್ರತಿ ಶ್ರಾವಣ ಮಾಸದಲ್ಲೂ ಅಗ್ರಹಾರದ ಗ್ರಾಮ ದೇವತೆಗೆ ಒಂದು ಕೆಂಪುಬಣ್ಣದ ಅಥವಾ ಅರಿಶಿನ ಬಣ್ಣದ ಸೀರೆ ಕುಪ್ಪುಸ ಪೋಸ್ಟಿನಲ್ಲಿ ದೇವರ ಭಟ್ಟರ ಹೆಸರಿಗೆ ಹೋಗುತ್ತಿತ್ತು. ಇಷ್ಟಾದರೂ ನನಗೆ ಆ ಗ್ರಾಮದ ಬಗ್ಗೆಯಾಗಲಿ, ಅಲ್ಲಿನ ಗ್ರಾಮದೇವತೆಯ ಬಗ್ಗೆಯಾಗಲೀ ಎಳ್ಳಷ್ಟೂ ಆಸಕ್ತಿ ಮೂಡಿರಲಿಲ್ಲ. ಒಂದೋ ಎರಡೋ ಸಲ ಆ ಗ್ರಾಮದ ಪಟೇಲರು, ಶ್ಯಾನುಭೋಗರು, ರೈತರು ನಮ್ಮ ಮನೆಗೆ ಬಂದದ್ದುಂಟು. ಆದರೆ ಏನು ಕಾರಣವೋ ಏನೋ ಯಾವ ಆಸಕ್ತಿಯನ್ನೂ ವಹಿಸದಿದ್ದ ನನಗೆ ನನ್ನ ತಾತನವರ ಗ್ರಾಮವನ್ನು ಹುಡುಕಿಕೊಂಡು ಹೋಗುವ ಆಸಕ್ತಿ ಇದ್ದಕ್ಕಿದ್ದಂತೆ ಮೂಡಿತು. ತಿರುಮಲಾಂಬಾ ಅವರ 'ಮರುಶೋಧ'ವಾದ ಮೇಲೆ ನನ್ನಲ್ಲಿ ಒಂದು ರೀತಿಯ

ಸಂಶೋಧನಾ ಪ್ರವೃತ್ತಿ ಬೆಳೆದುಬಿಟ್ಟಿರುವುದೂ ಒಂದು ಕಾರಣವಿರಬೇಕು ! ಅಲ್ಲದೆ ನನ್ನ ತಂದೆಯವರ ಬಂಧುಗಳನೇಕರು ಹಾಸನ, ಚೆನ್ನರಾಯಪಟ್ಟಣ, ಕೋಣನೂರು, ನುಗ್ಗೇಹಳ್ಳಿ, ಜಂಬೂರು ಇಲ್ಲಿಯ ನಿವಾಸಿಗಳಾಗಿದ್ದರಿಂದ ಅಗ್ರಹಾರವನ್ನು ಹುಡುಕುವುದೇನೂ ಕಷ್ಟವಾಗಲಾರದೆಂಬ ಧೈರ್ಯವೂ ಇತ್ತು. ನನ್ನ ಸಹೋದ್ಯೋಗಿಗಳಾದ ಶ್ರೀ ಎಸ್. ವಿ. ಶ್ರೀಧರಮೂರ್ತಿ ಅವರ ಬಳಿ ಈ ವಿಷಯ ಪ್ರಸ್ತಾಪ ಮಾಡಲು ಅವರು ನನಗೆ ಗನ್ನಿ ಅಗ್ರಹಾರಕ್ಕೆ ಹೋಗುವ ಮಾರ್ಗವನ್ನು ಆದಷ್ಟು ವಿವರವಾಗಿ ತಿಳಿದುಕೊಂಡು ಬಂದು ಹೇಳಿದರು. ಅವರು ಶಿವರದವರು. ನಮ್ಮ ತಾತ ಕಾಲವಾದ ಸುಮಾರು ನಲವತ್ತು ವರುಷಗಳ ಮೇಲೆ ನಾನು ಅಗ್ರಹಾರವನ್ನು ಹುಡುಕಿಕೊಂಡು ಹೊರಟೆ !

ಚೆನ್ನರಾಯಪಟ್ಟಣದಿಂದ ಸ್ವಲ್ಪ ಹಿಂದಕ್ಕೂ ಮುಂದಕ್ಕೂ ಓಡಾಡಿ ರಸ್ತೆಯಲ್ಲಿ ಸಿಕ್ಕಿದವರನ್ನೆಲ್ಲಾ ಅಗ್ರಹಾರ ಎನ್ನುವ ಗ್ರಾಮ ಇಲ್ಲಿದೆಯೇ ಎಂದು ವಿಚಾರಿಸಿ ಅಂತೂ ಅಗ್ರಹಾರವನ್ನು ತಲಪಿದೆವು. ನನಗೆ ಸಂತೋಷವೋ ಸಂತೋಷ ! ದೇವರು ಭಟ್ಟರು ಇದಾರೆಯೇ ಎಂದು ವಿಚಾರಿಸಿದೆ. ಅವರು ಮಂಡ್ಯದಲ್ಲಿ ಮಗನ ಮನೆಯಲ್ಲಿ ಇದಾರೆ. ಅವರಿಗೆ ವಯಸ್ಸಾಗಿದೆ. (ಆಗದೆ ಇರುತ್ತದೆಯೆ ?) ಅವರ ಮಗ ಚಂದ್ರಶೇಖರ ಇಲ್ಲಿಯ ಗುಡಿಯ ಅರ್ಚಕರು. ಅಲ್ಲಿ ನೋಡಿ ಅದೇ ಮನೆ. ಆದರೆ ಅವರು ಊರಲ್ಲಿಲ್ಲ. ಎಂದರು. ಹೋಗಲಿ, ಗುಡಿಯ ಬಾಗಿಲು ತೆಗೆದಿದೆಯೇ ಎಂದೆ. ಇಲ್ಲ ಬಾಗಿಲು ಹಾಕಿದೆ. ಬೀಗ ಇರುವುದು ಅರ್ಚಕರ ಹತ್ತಿರ ಎಂದರು. ನನಗೆ ನಿರಾಸೆಯೋ ನಿರಾಸೆ. ಹೋಗಲಿ ಗ್ರಾಮದೇವತೆ ಯಾವ ದೇವರು ಎಂದೆ. ಗುಡಿಯ ಮೇಲೆ ನಾಲ್ಕೂ ಕಡೆ ಇದ್ದ ಸಿಂಹಗಳ ಪ್ರತಿಮೆಯನ್ನು ನೋಡಿಯೇ ತಿಳಿಯಬಹುದಾಗಿತ್ತು. ಆದರೂ ಕೇಳಿದೆ. 'ಚಾಮುಂಡೇಶ್ವರಿ' ಎಂದ ಒಬ್ಬ ಹುಡುಗ. ಇಷ್ಟೆಲ್ಲಾ ಸಂಭಾಷಣೆ ನಡೆಯುತ್ತಿರುವಾಗ ನಮ್ಮ ಬಳಿಗೆ ಒಂದು ರೈತ ಕುಟುಂಬ ಬಂದಿತು.

"ಯಾರು ತಾಯಿ ನೀವು ?" ಎಂದರು. ಅವರಿಗೂ ಕುತೂಹಲ.

"ನಾನು ಬೆಂಗಳೂರಿನಿಂದ ಬಂದಿದೀನಿ. ನಮ್ಮ ತಾತ ಚಿದಂಬರಯ್ಯನವರು ಈ ಗ್ರಾಮದವರು. ಗಿಡ್ಡೇಗೌಡರು ಇದಾರೆಯೆ ?"

ನಮ್ಮ ತಾತನವರ ಹೆಸರು ಕೇಳಿದ ಕೂಡಲೇ ಅವರ ಮುಖ, ಮನ ಎರಡೂ ಅರಳಿತು.

"ಅಯ್ಯನೋರ ಮಗಳಾ ನೀವು ?"

"ಮಗಳಲ್ಲ, ಮೊಮ್ಮಗಳು. ನಮ್ಮ ತಂದೆ ಸಿ. ನರಸಿಂಹಮೂರ್ತಿ."

ಅಷ್ಟುಹೊತ್ತಿಗೆ ನನ್ನ ಸುತ್ತಲೂ ಒಂದು ದೊಡ್ಡ ಗುಂಪೇ ಸೇರಿತ್ತು.

"ನರಸಿಂಹಮೂರ್ತಿಯೋರಾ ! ಪುಣ್ಯಾತ್ಮ. ಅವರ ಕಾಲದಲ್ಲಿ ನಮ್ಮೂರಿಗೆ ಬಸ್ ಹಾಕಿಸಿಕೊಟ್ರು. ಈಗ ಬಸ್ ಇಲ್ಲಿ ತನಕ ಬರುತ್ತೆ. ಬನ್ನಿ, ಬನ್ನಿ. ನೋಡಿ ಗಿಡ್ಡೇಗೌಡರ ಮಗ, ಸೊಸೆ, ಅಣ್ಣನ ಮಕ್ಕಳು. ಬನ್ನಿ ತಾಯಿ ಬನ್ನಿ."

ಪ್ರೀತಿಯ ಮಹಾಪೂರವೇ ಹರಿಯಿತು. ನನ್ನನ್ನು ನನ್ನ ಜೊತೆ ಬಂದಿದ್ದ ನಮ್ಮ ಕಾಲೇಜು ಸಿಬ್ಬಂದಿ ಶ್ರೀ ಬಿ. ಎಸ್. ಚಂದ್ರಶೇಖರ ಅವರನ್ನೂ ಗಿಡ್ಡೇಗೌಡರ ಮನೆಯ ಬಂಧುಗಳು ದಬ್ಬಿಕೊಂಡೇ ಅವರ ದೊಡ್ಡಮನೆಗೆ ಕರೆದುಕೊಂಡು ಹೋದರು.

"ಏನ್ ತಾಯಿ ಇಲ್ಲೀ ತನಕ ಬಂದಿರಿ ?"

"ಸುಮ್ನೆ ನಮ್ಮೂರು ನೋಡೋಣ ಅಂತ ಬಂದೆ."

"ಬಹಳ ಸಂತೋಷ ತಾಯಿ. ನೋಡಿ ನಿಮ್ಮ ತಾತನವರ ಮನೆ ಅಲ್ಲೇ ಇತ್ತು. ಆ ರೈತ ಕುಟುಂಬದ ಯಜಮಾನ ಬಹಳ ವಿನಯದಿಂದ ಹೇಳಿದ.

"ನೋಡಿ ತಾಯಿ, ನಿಮ್ಮ ಜಮೀನೆಲ್ಲಾ ಈಗ ನಮಗೇ ಸೇರಿದೆ. (ಇದ್ದದ್ದು ಒಂದೋ, ಒಂದುವರೆ ಎಕರೇನೋ ಅಷ್ಟೆ). ಬನ್ನಿ ನಿಮ್ಮ ಜಮೀನು ಇರೋ ಜಾಗ ತೋರಿಸ್ತೀವಿ."

"ಪರವಾಗಿಲ್ಲ ಬಿಡಿ. ನಿಮ್ಮ ವಿಶ್ವಾಸ ದೊಡ್ಡದು" ಎಂದೆ.

ಜಮೀನಿಗಿಂತ ನನಗೆ ಆ ಪುಟ್ಟ ಚಾಮುಂಡಿಗುಡಿ, ಗ್ರಾಮದೇವತೆಯನ್ನು ನೋಡಿಕೊಂಡು ಹೋಗಬೇಕೆನ್ನುವ ಆಸೆ. ಅದು ಫಲಿಸಲಿಲ್ಲ. ಆದರೆ ಗಿಡ್ಡೇಗೌಡರ ಕುಟುಂಬ ಮಾತ್ರ ಎಳನೀರು, ತೆಂಗಿನಕಾಯಿ ಇತ್ಯಾದಿಗಳಿಂದ ನಮ್ಮ ಕಾರನ್ನು ತುಂಬಿಸಿತು. ಕಾಫಿ, ಹಾಲು ಕುಡಿದು, ಬಾಳೆಹಣ್ಣು ತಿಂದದ್ದಾಯಿತು. ಎಷ್ಟೇ ಕಾದರೂ ಅರ್ಚಕ ಚಂದ್ರಶೇಖರ ಅವರು ಬರಲಿಲ್ಲ. ನಾನು ಅಲ್ಲಿಂದ ಸುಬ್ರಹ್ಮಣ್ಯಕ್ಕೆ ಹೋಗಬೇಕಾಗಿತ್ತು. ಯಾರೋ ಹೇಳಿದರು; ಹಾಸನದಲ್ಲಿದ್ದರೂ ಇರಬಹುದು. ಹಾಸನ ಏನು ಇಲ್ಲೆ. ಹೋಗಿ ನೋಡಿ. ನಾನು ನಮ್ಮ ತಾತನ ಮನೆಯಿದ್ದ ಕಡೆಯೆಲ್ಲಾ ಸ್ವಲ್ಪ ಓಡಾಡಿದೆ. ಹಾಸನದಲ್ಲೂ ನೋಡಿಯೇ ಬಿಡೋಣವೆಂದು ಕಾರು ಹತ್ತಿದೆವು. ಕಾರು ಮುಂದಕ್ಕೆ ಹೋಗಲೇ ಬಿಡಲಿಲ್ಲ; ಆ ಜನರ ಪ್ರೀತಿವಿಶ್ವಾಸ.

ಕಾರನ್ನು ಆದಷ್ಟು ವೇಗವಾಗಿ ಓಡಿಸಿ ಹಾಸನ ತಲುಪಿದೆವು. ಅಲ್ಲಿ ಯಾರನ್ನೋ ಕೇಳಿ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನವನ್ನು ತಲುಪಿದ್ದಾಯಿತು. ಹಾಸನದಲ್ಲಿ ಅಷ್ಟು ಸೊಗಸಾದ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಇದೆಯೆಂಬ ವಿಷಯ ನನಗೆ ತಿಳಿದಿರಲಿಲ್ಲ. ನಮ್ಮ ಮನೆದೇವರು ಲಕ್ಷ್ಮೀನರಸಿಂಹಸ್ವಾಮಿ. ಅಗ್ರಹಾರ ಹಾಸನದಿಂದೇನೂ ದೂರವಿರಲಿಲ್ಲ. ಹಾಗಾದರೆ ಹಾಸನದ ಲಕ್ಷ್ಮೀನರಸಿಂಹಸ್ವಾಮಿಯೇ

ನಮ್ಮ ಮನೆದೇವರೇ ? ಮೈಸೂರಿನ ಅರಸರು ಆಶ್ರಯದಾತರು. ನಮ್ಮ ತಾತನವರ ಕುಟುಂಬವೂ ಯಾವುದೋ ಕಾಲದಲ್ಲಿ ಹಾಸನಕ್ಕೆ ಬಂದು ಅನಂತರ ಅಗ್ರಹಾರ ದಾನವಾಗಿ ದೊರೆತಾಗ ಅಲ್ಲಿ ಹೋಗಿ ನೆಲೆಸಿಂತರೆ ? ಊಹೆ ಸಾಕೆನಿಸಿ ದೇವರಿಗೆ ಪೂಜೆ ಮಾಡಿಸಿದೆವು. ಅಲ್ಲೊಂದು ಬೋರ್ಡು ಕಣ್ಣಿಗೆ ಬಿತ್ತು. 'ದೇವರ ರಥದ ಜೀರ್ಣೋದ್ಧಾರವಾಗಬೇಕಾಗಿದೆ. ಕಾಣಿಕೆಗಳನ್ನು ಸ್ವೀಕರಿಸುತ್ತೇವೆ.' ಸುಂದರ ಕೆತ್ತನೆಯ ರಥ ಒಂದು ಮೂಲೆಯಲ್ಲಿ ಕುಳಿತು ಶಿಥಿಲವಾಗಿ ಜೀರ್ಣೋದ್ಧಾರಕ್ಕಾಗಿ ಕಾಯುತ್ತಿತ್ತು. ಅಲ್ಲಿಯ ದೇವಸ್ಥಾನದ ಅರ್ಚಕರ ಮನೆಯಲ್ಲೂ ಆತಿಥ್ಯವಾಯಿತು. ಅಗ್ರಹಾರದ ಅರ್ಚಕರು ಸಿಗಲಿಲ್ಲ. ಆದರೆ ಲಕ್ಷ್ಮೀನರಸಿಂಹನ ದರ್ಶನವಾಯಿತು. ಕೆಲವು ದಿನಗಳಾದ ಮೇಲೆ ನಾನು ಅಗ್ರಹಾರಕ್ಕೆ ಹೋಗಿದ್ದ ವಿಷಯ ತಿಳಿದ ಅರ್ಚಕ ಚಂದ್ರಶೇಖರ ಅವರೇ ಬೆಂಗಳೂರಿನಲ್ಲಿ ನಮ್ಮ ಮನೆಗೆ ಬಂದರು. ಇನ್ನು ಮೇಲೆ ಬರಬೇಕಾದರೆ ಒಂದು ಕಾರ್ಡು ಹಾಕಿಬಿಡಿ, ತಿರುಗಿ ಖಂಡಿತ ಬನ್ನಿ ಎಂದರು. ಅವರ ಮಗಳ ಮದುವೆಯನ್ನು ಬೆಂಗಳೂರಿನಲ್ಲೇ ಮಾಡಿದಾಗ ನಾನು ಹೋಗಿದ್ದೆ. ನನ್ನ ತಂಗಿಯ ಮಗಳ ಮದುವೆಗೂ ಅವರನ್ನೂ, ಪಟೇಲರನ್ನೂ ಕರೆದಿದ್ದೆ. ಪತ್ನೀಸಮೇತರಾಗಿ ಬಂದಿದ್ದರು. ಅರ್ಚಕರ ಮಗಳ ಮದುವೆಗೆ ವಯೋವೃದ್ಧ ದೇವರು ಭಟ್ಟರು ಬಂದಿದ್ದರು. ವಯಸ್ಸಾದರೂ ಏನು ವರ್ಚಸ್ಸು ! ಹಣೆಯಲ್ಲಿ ವಿಭೂತಿ, ಕತ್ತಿನಲ್ಲಿ ರುದ್ರಾಕ್ಷಿ ಮಾಲೆ. ಅವರನ್ನು ನೋಡಿ ನಾನು ಪುಳಕಿತಳಾದೆ. ಅವರ ಮಗಳು ಬಂದರು. 'ಅಮ್ಮ ನೀವು ನಮ್ಮೂರಿನ ಹೆಣ್ಣುಮಗಳು' ಎಂದರು. ಅರ್ಚಕ ಚಂದ್ರಶೇಖರ ಅವರನ್ನು ಊರಿನ ರೈತರು ವಿಶ್ವಾಸದಿಂದ ನೋಡಿಕೊಂಡು ಚಾಮುಂಡೇಶ್ವರಿ ಗುಡಿಯ ಪೂಜೆಗಾಗಿ ನೇಮಿಸಿಕೊಂಡಿದ್ದಾರೆ. ಸಂಬಂಧಿಕರೆಲ್ಲಾ ಮೈಸೂರು, ಬೆಂಗಳೂರು ಸೇರಿದ್ದಾರೆ.

ನಮ್ಮ ತಂದೆ ಬೊಬ್ಬೂರು ಕಮ್ಮೆಗಳು. ಬೊಬ್ಬೂರು ಕಮ್ಮೆ ಎನ್ನುವುದು ಬ್ರಾಹ್ಮಣರಲ್ಲಿ ಒಂದು ಅಚ್ಚಗನ್ನಡದ ಒಳಪಂಗಡ. ಆದರೆ ಬೊಬ್ಬೂರು ಕಮ್ಮೆಗಳು ಕರ್ನಾಟಕಕ್ಕೆ ವಲಸೆ ಬಂದವರು. ಮೈಸೂರಿನ ಬೊಬ್ಬೂರು ಕಮ್ಮೆ ಸಂಘದವರು ಪ್ರಕಟಿಸಿರುವ ಇತಿಹಾಸದಲ್ಲಿ ವಿವರ ಹೀಗಿದೆ.

"ಕಮ್ಮೆ ಜನಾಂಗದ ಪೂರ್ವಜರು ಕೈಲಾಸ ಪರ್ವತದ ತಪ್ಪಲಿನ ಮಾನಸ ಸರೋವರದ ಬಳಿ ಇದ್ದರು. ಕ್ರಮೇಣ ಅಲ್ಲಿ ಪ್ರಕೃತಿಯ ಬದಲಾವಣೆಗಳಾಗುತ್ತ ಅಲ್ಲಿಯ ವಾಸವು ಕಠಿಣವಾಗುತ್ತ ಬಂದಿತು. ಆದ್ದರಿಂದ ಅವರು ಅದನ್ನು ಬಿಟ್ಟು ಮಧ್ಯ ಏಷ್ಯಾದ ಪಾರ್ಶೀಸ್ಥಾನ (ಪರಾಶರ) ಆಫ್ಘಾನಿಸ್ಥಾನ (ಗಾಂಧಾರ) ಕಾಶ್ಮೀರಗಳ ಮೂಲಕ ಪಂಜಾಬಿನ ಸಿಂಧು ಹಾಗೂ ಅವುಗಳ ಉಪನದಿಗಳಿರುವಲ್ಲಿಗೆ ಬಂದರು. ಅಲ್ಲಿಂದ ಸ್ವಲ್ಪಸ್ವಲ್ಪವಾಗಿ ಗಂಗಾ-ಯಮುನೆಗಳ ಅಂತರ್ವೇದಿಯನ್ನು ಸೇರಿದರು. ಅಲ್ಲಿಂದ ಬೇರೆ ಕಡೆಗಳಿಗೆ ಹೊರಡಲು ಉದ್ಯುಕ್ತರಾದರು. ಅವರಲ್ಲಿ ಬಹುಮಂದಿ ಗಂಗಾಸಾಗರ ಸಂಗಮಕ್ಕೆ ಬಂದು ಅಲ್ಲಿಂದ ಉತ್ಕಲ (ಒರಿಸ್ಸಾ)ದ ಮೂಲಕ ಆಂಧ್ರಪ್ರದೇಶದ ಕಾಕುಳಂ,

ಗಂಜಾಂ, ವಿಶಾಖಪಟ್ಟಣ, ರಾಜಮಹೇಂದ್ರಿ ಇವನ್ನು ಒಳಗೊಂಡ ಕಳಿಂಗ ರಾಜ್ಯದಲ್ಲಿ ಬಂದು ನೆಲೆಸಿದರು. ಈ ರೀತಿ ಅವರು ಬಂದು ನೆಲೆಸಿದ ಸ್ಥಳಗಳಿಗೆ ಒಟ್ಟಾಗಿ 'ಕಮ್ಮೆ ದೇಶ' ಎಂದು ಹೆಸರು.

ಜ್ಞಾನ ಸಂಪಾದನೆಗೆ ಚಿತ್ತಶುದ್ಧಿ ಅಗತ್ಯ. ಚಿತ್ತಗಳು ಶುದ್ಧವಾಗಬೇಕಾದರೆ ಕರ್ಮಗಳು ಅವಶ್ಯಕ. ಕರ್ಮಗಳೆಂದರೆ ವೇದೋಕ್ತವಾದ ನಿತ್ಯ ಕರ್ಮಗಳು. 'ಸ್ಮಾರ್ತ' ಎಂದರೆ ಪ್ರತಿ ಮನ್ವಂತರದ ಪ್ರಾರಂಭದಲ್ಲಿಯೂ ಹಿಂದಿನ ಮನ್ವಂತರದಲ್ಲಿ ಆಚರಣೆಯಲ್ಲಿದ್ದ ಧರ್ಮವನ್ನು ತಮ್ಮ ದಿವ್ಯಜ್ಞಾನದಿಂದ 'ಸ್ಮೃತಿ'ಗೆ ತಂದುಕೊಂಡು ಅವುಗಳನ್ನು ಅನುಷ್ಠಾನ ಮಾಡುವುದು. ಇವು ದಾನ, ಸತ್ಯ, ತಪಸ್ಸು, ಲೋಕಾನುಸರಣ, ವಿದ್ಯೆ, ಯಾಗ, ಉಪಾಸನೆ, ಇಂದ್ರಿಯ ನಿಗ್ರಹ ಎಂದು ಎಂಟು ವಿಧಗಳಾಗಿವೆ.

ಶ್ರೀ ಕೃಷ್ಣನು ಗೀತೆಯಲ್ಲಿ :

"ಶಮೋದಮಸ್ತಪಃ ಶೌಚಂ ಶಾಂತಿರಾರ್ಜಮಮೇವಚ ।

ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಾಹ್ಮಕಮ್ ಸ್ವಭಾವಜಮ್॥" ಎಂದಿದ್ದಾನೆ.

ಇಂತಹ ಶ್ರೌತ (ಶೃತಿ) ಸ್ಮಾರ್ತ (ಸ್ಮೃತಿ) ಕರ್ಮಗಳನ್ನು ನಿಷ್ಕಾಮನೆಯಿಂದ ಮಾಡಿದರೆ ಅದರಿಂದ ಈಶ್ವರಪ್ರಸಾದ ಲಭಿಸಿ ಚಿತ್ತಶುದ್ಧಿಯಾಗುವುದು.

ಇಂತಹ ಶ್ರೇಷ್ಠಧ್ಯೇಯವನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿರುವ ಬ್ರಾಹ್ಮಣರೇ 'ಕರ್ಮಠರು' ಅಥವಾ 'ಕರ್ಮಿ'ಗಳು. ಈ 'ಕರ್ಮಿ' ಎಂಬುದೇ ರೂಢಿಯಲ್ಲಿ 'ಕಮ್ಮಿ' ಆಗಿ ಇತ್ತೀಚೆಗೆ 'ಕಮ್ಮೆ' ಆಗಿದೆ. 'ಕಮ್ಮೆ'ಗಳು ಸ್ಮಾರ್ತ ಬ್ರಾಹ್ಮಣರು, ಅದ್ವೈತ ವೇದಾಂತಾನುಯಾಯಿಗಳು.

ಈಗಾಗಲೇ ಹೇಳಿರುವಂತೆ ಕಮ್ಮೆ ಜನಾಂಗದ ಪೂರ್ವಜರು ವೈದಿಕ ಮತಾವಲಂಬಿಗಳಾಗಿದ್ದ ಶಾತವಾಹನರ 'ಶ್ರೀಕಾಕುಳಂ' ಜಿಲ್ಲೆಯಲ್ಲಿ ಪ್ರಪ್ರಥಮವಾಗಿ ನೆಲೆನಿಂತು ಅಲ್ಲಿಂದ ಮಿಕ್ಕಪ್ರದೇಶಗಳಿಗೂ ಹೋಗಿ ಕರ್ನಾಟಕಕ್ಕೂ ವಲಸೆ ಬಂದರು. ಶ್ರೀಕಾಕುಳಂ ಪ್ರಸಿದ್ಧ ಸೂರ್ಯಕ್ಷೇತ್ರ. ಅದಕ್ಕೆ 60 ಮೈಲಿ ದೂರದಲ್ಲಿರುವ 'ಬಭ್ರುಪುರಿ' ಸುಪ್ರಸಿದ್ಧ ಅಗ್ನಿಕ್ಷೇತ್ರ. ಕರ್ಮಠ ಬ್ರಾಹ್ಮಣರಿಗೆ ತಮ್ಮ ಕರ್ಮಾಚರಣೆಗೆ ಮುಖ್ಯವಾದ ದೇವತೆಗಳು ಸೂರ್ಯ ಮತ್ತು ಅಗ್ನಿ. ಶ್ರೀಕಾಕುಳಂ ಜಿಲ್ಲೆಯಲ್ಲಿ ಅಗ್ನಿ ಮತ್ತು ಸೂರ್ಯರ ಸ್ವಕ್ಷೇತ್ರಗಳಿರುವುದಲ್ಲದೆ ಕರ್ಮಿಷ್ಠ ಬ್ರಾಹ್ಮಣರಿಗೆ ರಾಜಾಧಿರಾಜರು ದಾನವಾಗಿ ಕೊಟ್ಟ ಅನೇಕ ಅಗ್ರಹಾರಗಳಿವೆ.

'ಬಭೃಪುರಿ' (ಬಭೃ ಎಂದರೆ ಅಗ್ನಿ) ರೂಢಿಯಲ್ಲಿ "ಬೊಬ್ಬಿ"ಯಾಯಿತು. ಜೊತೆಗೆ ಅದೇ ಕ್ಷೇತ್ರವನ್ನು ತೆಲುಗರು ಬಭ್ರುಡ ಊರು; ಬಭ್ರುಡೂರು ಎಂದು ಕರೆದು ಅದು 'ಬೊಬ್ಬೂರು' ಆಯಿತು.

ಹೀಗೆ 'ಬೊಬ್ಬೂರು ಕಮ್ಮೆ'ಗಳು ಶ್ರೀಕಾಕುಳಂ ಕಡೆಯಿಂದ ಬಂದವರು.

ಸಂಪ್ರದಾಯವೆಲ್ಲಾ ಬಹುವಾಗಿ ಆಂಧ್ರ ಸಂಪ್ರದಾಯಗಳೆ. ಬೊಬ್ಬೂರು ಕಮ್ಮೆಗಳ ಮನೆ ಮಾತು ಮೊದಲು ಸಂಸ್ಕೃತವಾಗಿದ್ದು, ಅನಂತರ ತೆಲುಗಾಗಿ ಕನ್ನಡ ನಾಡಿನಲ್ಲಿ ನೆಲೆನಿಂತ ಮೇಲೆ ಕನ್ನಡವಾಯಿತು. (ಬಬ್ಬೂರು ಕಮ್ಮೆ ಎಂಬುದಕ್ಕೆ ಬೇರೆ ಬೇರೆ ವ್ಯಾಖ್ಯಾನಗಳೂ ಇವೆಯೆಂದೂ, ಆದರೆ ಅವೆಲ್ಲ ಸರಿಯಾದ ಅರ್ಥ ಕೊಡುವುದಿಲ್ಲವೆಂದೂ ಬಬ್ಬೂರು ಕಮ್ಮೆ ಯಶೋಡಿಂಡಿಮದ ಲೇಖಕರಾದ ಶ್ರೀ ಬಿ. ಎಸ್. ಕಪನೀಪತಯ್ಯನವರು ಸೋದಾಹರಣವಾಗಿ ವಿವರಿಸಿದ್ದಾರೆ.) ಬಬ್ಬೂರು ಕಮ್ಮೆಗಳು ಎರಡನೇ ಪುಲಿಕೇಶಿಯ ಆಳ್ವಿಕೆಯ ಕಾಲದಲ್ಲಿ (ಕ್ರಿ. ಶ. 609ರಿಂದ 42) ಬ್ರಾಹ್ಮಣರಿಗೆ ಗೌರವ ರಕ್ಷಣೆಗಳಿವೆ ಎಂಬುದನ್ನು ಕೇಳಿ ವಲಸೆ ಬಂದರು ಎನ್ನಬಹುದು. ಮೊದಲಿಗೆ ಮಾನಸ ಸರೋವರ ಪ್ರದೇಶವಾಸಿಗಳಾಗಿ ಅಲ್ಲಿಂದ ಬಂದು ಆಂಧ್ರದಲ್ಲಿ ನೆಲೆಸಿ ಮುಂದೆ ಏಳನೆಯ ಶತಮಾನದ ವೇಳೆಗೆ ಕರ್ನಾಟಕಕ್ಕೆ ವಲಸೆ ಬಂದು ಸುಮಾರು ಸಾವಿರದ ಮುನ್ನೂರು ವರುಷಗಳಿಂದಲೂ ಕನ್ನಡ ನಾಡು, ನುಡಿಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ.''

ಹೀಗೆ ವಲಸೆಬಂದು ಕರ್ನಾಟಕದಲ್ಲಿ ನೆಲೆಸಿದ ಕುಟುಂಬಗಳಲ್ಲಿ ನಮ್ಮ ತಾತನವರ ಕುಟುಂಬವೂ ಒಂದು. ನಮ್ಮ ಮುತ್ತಾತ ನರಸಿಂಹಯ್ಯನವರು. ಅವರಿಗೆ ನಮ್ಮ ತಾತ ಚಿದಂಬರಯ್ಯನವರಲ್ಲದೆ ನಿಂಗಮ್ಮ ಎಂಬ ಮಗಳೊಬ್ಬರಿದ್ದರು. ನಮ್ಮ ತಾತ ಹಾಗೂ ಅವರ ತಂಗಿಯರ ಮಕ್ಕಳಲ್ಲಿ ಹಲವರನ್ನು ಕೊಟ್ಟು ತಂದಿದ್ದಾರೆ. ನಮ್ಮ ತಾತನವರಿಗೆ ಆರು ಜನ ಹೆಣ್ಣುಮಕ್ಕಳು; ದೊಡ್ಡವರು ನರಸಮ್ಮ, ಆಮೇಲೆ ಲಲಿತಮ್ಮ, ಪಾರ್ವತಮ್ಮ, ನಂಜಮ್ಮ. ನಾನು ನೋಡುವ ವೇಳೆಗೆ ಹೊನ್ನಮ್ಮ, ಸುಬ್ಬಮ್ಮ ಇವರಿಬ್ಬರು ಕಾಲವಾಗಿದ್ದರು. ಇಬ್ಬರು ಗಂಡುಮಕ್ಕಳು; ದೊಡ್ಡವರು ನಮ್ಮ ತಂದೆ ನರಸಿಂಹಮೂರ್ತಿ, ಎರಡನೆಯವರು ಶ್ರೀಕಂಠಯ್ಯ. ಎಲ್ಲರೂ ದೈವಭಕ್ತರು. ಯಾರೂ ಸಂಕುಚಿತ ಮನೋಭಾವದವರಲ್ಲ. ಮನೆಯಲ್ಲಿ ಎಲ್ಲರಿಗೂ ಮಾನವೀಯ ಮೌಲ್ಯಗಳೇ ಮುಖ್ಯವಾಗಿದ್ದವು. ನಮ್ಮ ಅಜ್ಜಿ, ನಮ್ಮ ತಂದೆಯ ತಾಯಿ ಸಾವಿತ್ರಮ್ಮ ನಮ್ಮ ತಂದೆಯ ಮದುವೆಗೂ ಮೊದಲೇ ಕಾಲವಾಗಿದ್ದರು. ಆಕೆ ಬಹಳ ಐಶ್ವರ್ಯವಂತ ಕುಟುಂಬದಿಂದ ಬಂದಿದ್ದವರಂತೆ. ನಮ್ಮ ಮನೆಯಲ್ಲಿ ಅವರ ಒಂದು ಭಾವಚಿತ್ರವೂ ಇಲ್ಲ. ಆದರೆ ಅವರು ತುಂಬ ಸ್ಫುರದ್ರೂಪಿಯಾಗಿದ್ದು ಅವರ ಮುಖದ ಕಾಂತಿಗೆ ಮಾರು ಹೋದ ಜನ ಅವರು ಸಿಹಿಗುಂಬಳದ ಹಾಗಿದ್ದುದರಿಂದ 'ಕುಂಬಚ್ಚಮ್ಮ' ಎಂದೇ ಕರೆಯುತ್ತಿದ್ದರಂತೆ. ನಮ್ಮ ತಂದೆಯ ಮುಖದ ಕಾಂತಿಯೂ ಹಾಗೆ. ಅವರನ್ನು ಯಾರಾದರೂ 'ಪರಂಗಿಯವರು' ಎಂದು ಸುಲಭವಾಗಿ ಹೇಳಬಹುದಾಗಿತ್ತು. ಏಕೋ ಏನೋ ಕೆಲವು ಕಾಲದ ನಂತರ ನಮ್ಮ ತಾತನವರ ಕುಟುಂಬ ಬಡತನದಲ್ಲಿ ಸಿಲುಕಿತು. ನಮ್ಮ ತಂದೆಗೆ ಅಕ್ಕ, ತಂಗಿ, ತಮ್ಮಂದಿರೆಂದರೆ ಬಹಳ ವಿಶ್ವಾಸ. ಅವರೆಲ್ಲರೂ ಹಬ್ಬ ಹರಿದಿನಗಳಲ್ಲಿ, ಶ್ರಾದ್ಧದ ದಿವಸ ನಮ್ಮ ಮನೆಗೆ ಬರುತ್ತಿದ್ದರು. ನಮ್ಮ ತಾತ ಆಗಿನ ಕಾಲಕ್ಕೆ ನಾಲಾ ಇನ್ಸ್‌ಪೆಕ್ಟರಾಗಿದ್ದರಂತೆ. ಸಂಬಳ ಇಪ್ಪತ್ತು ರೂಪಾಯಿ ಬರುತ್ತಿತ್ತೋ ಏನೋ. ಪೆನ್‌ಷನ್ ಆರೋ ಏಳೋ ರೂಪಾಯಿ ಬರುತ್ತಿತ್ತು. ತುಂಗಾ-ಹೇಮಾವತಿ ನದಿಗಳ ನಾಲೆಗಳನ್ನು ಪರೀಕ್ಷಿಸುವ

ಕೆಲಸವಿದ್ದಾಗ ತೀರ್ಥಹಳ್ಳಿಯ ಬಳಿಯಿರುವ ಮಂಡಗದ್ದೆಯಲ್ಲಿ ನಮ್ಮ ತಂದೆ ಹುಟ್ಟಿದರಂತೆ. ನಾನು ಇತ್ತೀಚೆಗೆ ತೀರ್ಥಹಳ್ಳಿಗೆ ಹೋಗಿದ್ದಾಗ ಮಂಡಗದ್ದೆಯ ಬಳಿ ವಾಹನವನ್ನು ನಿಲ್ಲಿಸಿ ನಮ್ಮ ತಂದೆ ಹುಟ್ಟಿದ ಮನೆ ಯಾವುದಾಗಿರಬಹುದೆಂದು ಭ್ರಮಾಲೋಕದಲ್ಲಿ ಹಾರಾಡಿದ್ದೆ. 1911ರಲ್ಲಿದ್ದ ಹೆಂಚಿನ ಮನೆ ಈಗಲೂ ಇರಬಹುದೆ? ಆಶ್ಚರ್ಯವೆಂದರೆ 1911ರಲ್ಲಿ ನಮ್ಮ ತಂದೆ ಹುಟ್ಟಿದಾಗ ಆ ಊರಿನಲ್ಲಿದ್ದ ನರಸಮ್ಮ ಎಂಬುವರು ಮುಂದೆ 1949-50ರ ಸುಮಾರಿಗೆ ಮೈಸೂರಿನಲ್ಲಿ ನಮ್ಮ ಮನೆಗೆ ಕೆಲಸಕ್ಕೆ ಬಂದರು. ಅವರು ಆಗಾಗ ಈ ಕಥೆಯನ್ನೆಲ್ಲಾ ಅಲ್ಪಸ್ವಲ್ಪ ಹೇಳುತ್ತಿದ್ದರು. ತುಂಗಾ ತೀರದಲ್ಲಿ ರಮಣೀಯ ನಿಸರ್ಗದ ಮಧ್ಯೆ ಹುಟ್ಟಿದ ನಮ್ಮ ತಂದೆ ನಿಸರ್ಗ ಪ್ರೇಮಿಯಾದದ್ದೂ, ಸಾಹಿತ್ಯಾರಾಧಕರಾದದ್ದೂ ಆಶ್ಚರ್ಯವೇನಲ್ಲ. ಮುಂದೆ ನಂಜನಗೂಡಿನಲ್ಲಿ ಅಕ್ಕ ನರಸಮ್ಮನವರ ಮನೆಯಲ್ಲಿದ್ದು ಹೈಸ್ಕೂಲು ಅಭ್ಯಾಸ ಮುಗಿಸಿ ಕಾಲೇಜು ವಿದ್ಯಾಭ್ಯಾಸಕ್ಕೆ ಬರುವ ಹೊತ್ತಿಗೆ ತಾತಯ್ಯನವರು ಮೈಸೂರಿನಲ್ಲಿ ಸ್ಥಾಪಿಸಿದ್ದ ಅನಾಥಾಲಯವನ್ನು ಸೇರಿ ಕನ್ನಡ ಪತ್ರಿಕಾಲೋಕದ ಪಿತಾಮಹ ಪಿ. ಆರ್. ರಾಮಯ್ಯನವರೇ ಮುಂತಾದವರ ಮನೆಯಲ್ಲಿ ವಾರಾನ್ನ ಮಾಡಿಕೊಂಡು ಒಂಟಿಕೊಪ್ಪಲಿನಲ್ಲಿ ವೈಶ್ಯರೊಬ್ಬರ ಮನೆಯಲ್ಲಿ ಹಾರ್ಮೋನಿಯಂ ಪಾಠ ಹೇಳಿ ತಿಂಗಳಿಗೆ ಐದು ರೂಪಾಯಿ, ಸಾಧ್ವಿ ತಾಯಿನಾಡು ಬಾತ್ಮೀದಾರರಾಗಿ ಐದು ರೂಪಾಯಿ ಸಂಪಾದಿಸಿ ತಮ್ಮ ಓದು ಸಾಗಿಸಿ ಎಂ. ಎ., ಎಂ. ಸಿ. ಎಸ್. ಪರೀಕ್ಷೆಗಳಲ್ಲಿ ಪ್ರಥಮ ರ್‍ಯಾಂಕು, ಅನೇಕ ಚಿನ್ನದ ಪದಕಗಳನ್ನು ಗಳಿಸಿದ್ದು ಈಗ ಇತಿಹಾಸ. ಒಂದು ದಿನ ನಮ್ಮ ಕಾಲೇಜಿನ ಹತ್ತಿರ Federal India Indian States ಎಂಬ ಪತ್ರಿಕೆಯ ಸಂಪಾದಕರಾಗಿದ್ದ ಹಿರಿಯ ಪತ್ರಕರ್ತ ಎಚ್. ಶ್ರೀಕಂಠಯ್ಯನವರು ಸಿಕ್ಕಿದ್ದರು. ಅವರು ನನಗೆ ಆಗಾಗ ಸಿಗುತ್ತಿದ್ದರು. ಅವರೇ ಮಾತಿಗೆ ಆರಂಭಿಸಿದರು. "ನೀವೆಲ್ಲಾ ಈವತ್ತು ಇಷ್ಟು ಮಾತ್ರ ಇರೋದು ಯಾಕೆ ಗೊತ್ತಾ?"

ನಾನು ಸುಮ್ಮನಿದ್ದೆ.

"ನಿಮ್ಮಜ್ಜಿ ಇದ್ದಳಲ್ಲಾ ಸಾವಿತ್ರಿ, ಅವಳು ಕಂಡಕಂಡ ಕಲ್ಲಿಗೆಲ್ಲಾ ಕೈಮುಗಿದು 'ನನ್ನ ಮನೇನ ಚೆನ್ನಾಗಿಡಪ್ಪಾ. ನನ್ನ ಮಕ್ಕಳನ್ನು ಚೆನ್ನಾಗಿಡಪ್ಪಾ ಅಂತ ಅಡ್ಡಬೀಳ್ತಾ ಇದ್ದಳಲ್ಲಾ, ಆದಕ್ಕೆ." ನಿಜ, ದೊಡ್ಡವರ ಹರಕೆಯೇ ನಮಗೆ ರಕ್ಷೆ. ನಮ್ಮಜ್ಜಿ ಸಾವಿತ್ರಮ್ಮ ಮಗ ಕಾನ್‌ವೊಕೇಷನಲ್ಲಿ ಚಿನ್ನದ ಪದಕಗಳನ್ನು ಪಡೆಯುವುದನ್ನು ಕಂಡು ಹಿರಿಹಿರಿ ಹಿಗ್ಗಿದರಂತೆ. ನಮ್ಮ ತಾತ ಚಿದಂಬರಯ್ಯನವರು ಎಂಬತ್ತಾರು ವರುಷ ಬದುಕಿದ್ದರು. ಮಗನ ಮದುವೆಯಾದ ಮೇಲೆ ಅವರು ನಮ್ಮ ಮನೆಯಲ್ಲೇ ಬಂದಿದ್ದುಬಿಟ್ಟರು. ನಮ್ಮ ತಾಯಿಯನ್ನು ಮಗಳಿಗಿಂತ ಹೆಚ್ಚಿನ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಯಾವುದಕ್ಕೂ ಬಾಯಿ ಹಾಕುತ್ತಿರಲಿಲ್ಲ. ಅವರಾಯಿತು, ಅವರ ಸ್ನಾನ ಪೂಜೆಯಾಯಿತು. ಅವರ ಕೋಣೆಯಾಯಿತು. ಒಂದು ಸಣ್ಣ ಟ್ರಂಕಿನಲ್ಲಿ ಎರಡೋ ಮೂರೋ ಪಂಚೆ, ಎರಡು

ಹತ್ತಿಯ ಷರಟು, ಒಂದು ಕೋಟು, ಒಂದು ಟೋಪಿ ಇಷ್ಟೇ ಅವರ ಆಸ್ತಿ. ಅವರಷ್ಟು ಸಂಪೂರ್ಣ ಸಂತೃಪ್ತಿಯಿಂದಿದ್ದ ಮತ್ತೊಬ್ಬರನ್ನು ನಾನು ನೋಡಿಲ್ಲ. ಸಂಜೆಯಾಯಿತೆಂದರೆ ನಮಗೆ ಶ್ಲೋಕಗಳನ್ನು ಹೇಳಿಕೊಡುತ್ತಿದ್ದರು. ರಾಮಾಯಣ, ಮಹಾಭಾರತದ ಕಥೆಗಳನ್ನು ಹೇಳುತ್ತಿದ್ದರು. ಅವರೇ ನಮಗೆ ಮೊದಲ ಗುರು.

ನಮ್ಮ ತಂದೆ ಹೈಸ್ಕೂಲು ಓದನ್ನು ಮುಗಿಸಿ ಕಾಲೇಜು ಸೇರಬೇಕಾದಾಗ ಮುಂದೇನು ಮಾಡಬೇಕೆಂದು ಸಲಹೆ ಕೇಳಲು ಒಬ್ಬ ಪ್ರೊಫೆಸರ ಬಳಿ ಹೋದರಂತೆ.

"What do you want to do ?" ಎಂದು ಅವರು ಕೇಳಿದರಂತೆ.

ಅದಕ್ಕೆ ನಮ್ಮ ತಂದೆ, "I want to take medicine" ಎಂದರಂತೆ.

"Go to a hospital" ಎಂದರಂತೆ ಆ ಪ್ರೊಫೆಸರ್ !

ನಮ್ಮ ತಂದೆಗೆ ಎಲ್ಲಿಲ್ಲದ ಕೋಪ ಬಂದು ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರದ ವಿದ್ಯಾರ್ಥಿಯಾಗಿ ಪ್ರೊ॥ ವಿ. ಎಲ್. ಡಿಸೌಜಾ ಅವರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾದರು. ಅಷ್ಟೇ ಅಲ್ಲ; ಕಾಲೇಜಿನ ವಿದ್ಯಾರ್ಥಿ ಸಂಘದ ಪತ್ರಿಕೆ "The Union"ಗೆ ನಾ. ಕಸ್ತೂರಿ ಅವರೂ ನಮ್ಮ ತಂದೆ ಸಂಪಾದಕರಾಗಿದ್ದುದ್ದೂ, ಅದರಲ್ಲಿ ಮುಂದೆ ಸಾಹಿತ್ಯ ದಿಗ್ಗಜಗಳಾದ ಕುವೆಂಪು, ಡಿ. ಎಲ್. ಎನ್., ಆರ್. ಕೆ. ನಾರಾಯಣ್, ಎಂ. ವಿ. ಸೀತಾರಾಮಯ್ಯ ಮೊದಲಾದವರ ಬರಹಗಳನ್ನೆಲ್ಲಾ ಕೂಡಿ ಹಾಕಿ ಪ್ರಕಟಿಸುತ್ತಾ ಇದ್ದದ್ದೂ ಈಗ ನೆನಪು ಮಾತ್ರ.

ನಮ್ಮ ತಂದೆಯ ವಿದ್ಯಾರ್ಥಿ ದೆಸೆ ಅನಾಥಾಲಯದಲ್ಲಿ ತಾತಯ್ಯನವರ ಮಾರ್ಗದರ್ಶನದಲ್ಲಿ ಬಡತನದಲ್ಲೇ ಸಾಗಿ ಸಿದ್ಧಿ ಪಡೆಯಿತು. ಆದರೆ ಕಷ್ಟದ ಹಾದಿಯ ಅನುಭವ ಅವರ ಕೈಗಾವಲಾಗಿತ್ತು. ಅವರು ಮುಂದೆ ಐ. ಎ. ಎಸ್. ಅಧಿಕಾರಿ ಯಾದಾಗಂತೂ ದಕ್ಷತೆ, ಪ್ರಾಮಾಣಿಕತೆಯ ಪ್ರತೀಕವಾದರು. ಒಮ್ಮೆ ನಾನು ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಭಾಷಣ ಮಾಡಿದಾಗ ಪ್ರಶ್ನೋತ್ತರ ಸಮಯದಲ್ಲಿ ಒಬ್ಬಾತ ನನ್ನನ್ನು ಪ್ರಶ್ನಿಸಿದ. ಅದು ಒಂದು ತರಳೆ ಪ್ರಶ್ನೆ.

"Have you seen God ?"

"Yes" ಎಂದೆ.

ಆತ ಅವಾಕ್ಕಾದ. ದೇವರನ್ನು ಅಷ್ಟು ಸುಲಭದಲ್ಲಿ ನೋಡುವುದು ಸಾಧ್ಯವೇ ?

"Where ?" ಎಂದಾಗ, ನನ್ನ ಉತ್ತರ ಸಿದ್ಧವಾಗಿತ್ತು

"In my Father."

ನನ್ನ ತಾಯಿಯ ಪೂರ್ವಜರೂ ಆಂಧ್ರದವರೆ. ಆದರೆ ಅವರು ನನ್ನ ತಂದೆಯ

ಪೂರ್ವಜರಂತೆ ಆಂಧ್ರದಿಂದ ಕರ್ನಾಟಕಕ್ಕೆ ವಲಸೆ ಬಂದು 'ಅಚ್ಚ ಕನ್ನಡಿಗ'ರಾಗಲಿಲ್ಲ. ಅವರು ತಮ್ಮ ಭಾಷೆಯನ್ನೂ, ಆಚಾರ, ವಿಚಾರಗಳನ್ನೂ ಹಾಗೆಯೇ ಉಳಿಸಿಕೊಂಡವರು. ನಮ್ಮ ತಾಯಿಯ ಪೂರ್ವಜರು "ಮುಲಕನಾಡು" ತೆಲುಗು ಸ್ಮಾರ್ತ ಬ್ರಾಹ್ಮಣರು. "ಮುಲಕನಾಡು" ಎನ್ನುವುದು "ಮುನಿಕುಲನಾಡು" ಎನ್ನುವುದರ ಅಪಭ್ರಂಶವಂತೆ. ನಮ್ಮ ತಾಯಿಯ ಮಾತೃಭಾಷೆ ತೆಲುಗು. ನಮ್ಮ ತಾಯಿಯ ತಂದೆಯ ಊರು ಲಾಲಾಪೇಟೆ. ಇದು ಎಲ್ಲಿದೆಯೋ ನನಗೆ ತಿಳಿಯದು. ನಾನಿನ್ನೂ ಇದರ ಶೋಧಕ್ಕೆ ಹೊರಟಿಲ್ಲ. ಆದರೆ ನಮ್ಮ ತಾಯಿಯ ಪೂರ್ವಜರು ಮದರಾಸಿಗೆ ಹೋಗಿ ನೆಲೆಸಿದರು. ನಮ್ಮ ತಾಯಿಯ ತಂದೆ ಲಾಲಾಪೇಟ್ ರಾಮಕೃಷ್ಣರಾವ್. ಅವರ ತಮ್ಮ ಲಾಲಾಪೇಟ್ ವೆಂಕಟರಮಣಯ್ಯ. ನಮ್ಮ ತಾಯಿಯ ತಂದೆ ಮದರಾಸು ಮೆಡಿಕಲ್ ಕಾಲೇಜಿನಲ್ಲಿ ಓದಿ ವೈದ್ಯರಾದರು. ಅವರ ತಮ್ಮ ಮದರಾಸು ಲಾ ಕಾಲೇಜಿನಲ್ಲಿ ಓದಿ ವಕೀಲರಾದರು. ಅವರ ತಾಯಿ ಗೌರಮ್ಮ, ತಂದೆ ಕುಪ್ಪೂರಾವ್. ರಾಷ್ಟ್ರಾಧ್ಯಕ್ಷರಾದ ಸರ್ವಪಲ್ಲಿ ರಾಧಾಕೃಷ್ಣನ್ ಅವರೂ ನಮ್ಮ ತಾತನ ಕುಟುಂಬ ಒಂದೇ ವಠಾರದಲ್ಲಿದ್ದರಂತೆ. ನಮ್ಮ ತಾತ ಡಾ॥ ರಾಮಕೃಷ್ಣರಾಯರಿಗೆ ಇಬ್ಬರು ತಂಗಿಯರು. ಛಾಯಮ್ಮ, ಸುಬ್ಬುಲಕ್ಷ್ಮಿ. ಸುಬ್ಬಲಕ್ಷ್ಮಿ ಅವರು ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ವಾಜಪೇಯಂ ವೆಂಕಟಸುಬ್ಬಯ್ಯನವರ ಪತ್ನಿ.

ನಮ್ಮ ಅಜ್ಜಿ ಚಿದಂಬರಮ್ಮನವರಿಗೆ ಚಿಕ್ಕಂದಿನಲ್ಲೇ ಮದುವೆಯಾಗಿ ಅವರು ಸಂಸಾರ ಮಾಡಲು ಮದರಾಸಿಗೆ ಹೋದರು. ನಮ್ಮ ತಾತ ಅಜ್ಜಿಗೆ ನಮ್ಮ ತಾಯಿ ರಾಜರಾಜೇಶ್ವರಿ ಒಬ್ಬಳೇ ಮಗಳು. ನಮ್ಮ ತಾಯಿ ಹುಟ್ಟುವ ಸಮಯಕ್ಕೆ ನಮ್ಮ ಮುತ್ತಜ್ಜಿ ಶ್ರೀ ಲಲಿತಾಸಹಸ್ರನಾಮವನ್ನು ಓದುತ್ತಾ "ಶ್ರೀ ರಾಜರಾಜೇಶ್ವರ್ಯೈ ನಮಃ" ಎಂದು ಹೇಳುವ ಹೊತ್ತಿಗೆ ಸರಿಯಾಗಿ ನಮ್ಮ ತಾಯಿ ಹುಟ್ಟಿದರಂತೆ. ನನ್ನ ಅಜ್ಜಿಯ ತಾಯಿತಂದೆ ಲಕ್ಷ್ಮಯ್ಯ, ಲಕ್ಷ್ಮಮ್ಮನವರು ಬೆಂಗಳೂರಿನ ಚಾಮರಾಜಪೇಟೆ ಎರಡನೇ ಕ್ರಾಸಿನ ನಿವಾಸಿಗಳು. ಅವರಿಗೆ ಇಬ್ಬರು ಹೆಣ್ಣುಮಕ್ಕಳು. ನಮ್ಮ ಅಜ್ಜಿ ಚಿದಂಬರಮ್ಮ, ಅವರ ತಂಗಿ ಮಹಾಲಕ್ಷಮ್ಮ, ನನ್ನ ತಾಯಿಯ ತಾಯಿ, ತಂದೆ, ಇಬ್ಬರ ಕುಟುಂಬಗಳೂ ದೊಡ್ಡ ಪಟ್ಟಣಗಳಲ್ಲೇ ಇದ್ದರೂ ಅದೇಕೋ ಏನೋ ನನ್ನ ತಾಯಿಗೆ ಬಾಲ್ಯವಿವಾಹವಾಗಿ ಮದುವೆಯಾದ ಕೂಡಲೇ ವರ ಕಾಲವಾಗಿ ನನ್ನ ತಾಯಿ ಬಾಲವಿಧವೆಯಾದರು. ಮಗಳಿಗೆ ಇಷ್ಟು ಚಿಕ್ಕವಯಸ್ಸಿನಲ್ಲಿ ಮದುವೆ ಮಾಡಿದ್ದಕ್ಕೆ ಕೋಪಿಸಿಕೊಂಡು ನನ್ನ ಮುತ್ತಾತ ಕಾಶಿಗೆ ಹೊರಟುಹೋದರಂತೆ ! ಆದರೆ ನನ್ನ ತಾಯಿಯನ್ನು ಮೂಲೆಯಲ್ಲಿ ಕೂರಿಸದೆ ಓದಿಸಿ, ಪಿಟೀಲು, ಹಿಂದಿ ಕಲಿಸಿ ಸದಾಕಾಲ ಚಟುವಟಿಕೆಯಲ್ಲಿಟ್ಟಿದ್ದರು ನನ್ನ ಅಜ್ಜಿ ತಾತ. ಅಷ್ಟುಹೊತ್ತಿಗೆ ನಮ್ಮ ತಾಯಿಯ ತಂದೆಯ ಕುಟುಂಬ ಮದರಾಸನ್ನು ಬಿಟ್ಟು ಬೆಂಗಳೂರಿಗೆ ಬಂದು ಇಲ್ಲಿಯೇ ನೆಲೆಸಿತು. ನಮ್ಮ ಅಜ್ಜಿ ಯಾವ ತರಗತಿಯವರೆಗೆ ಓದಿದ್ದರೋ ತಿಳಿಯದು. ಆದರೂ ಅವರು ಆಧ್ಯಾತ್ಮಿಕ ಪುಸ್ತಕಗಳನ್ನೂ ಆಗಿನ ಕಾಲದ ಕಾವ್ಯ ನಾಟಕಗಳನ್ನೂ ಸದಾಕಾಲ ಓದುತ್ತಿದ್ದರು. ಅವರ ತಾಯಿ ಅಜ್ಜಿ ಅನೇಕ ಹಿರಿಯರು

ತೆಲುಗಿನಲ್ಲಿ ಹಾಡುಗಳನ್ನು ಮಾಡಿದ್ದರು, ಅನುಭಾವಿಗಳು. ನಮ್ಮ ತಾಯಿಯ ಪಿಟೀಲು ವಾದನವನ್ನು ಒಂದು ವಾದ್ಯಗೋಷ್ಠಿಯಲ್ಲಿ ಕೇಳಿ ಅವರ ಬಗ್ಗೆ ವಿಚಾರಿಸಿದ ನಮ್ಮ ತಂದೆ ನಮ್ಮ ತಾತನವರಿಗೆ ತಾವೇ ಕಾಗದ ಬರೆದು ತಾವಿದ್ದ ಅನಾಥಾಲಯದ ಸ್ಥಾಪಕ, ಸಮಾಜ ಸುಧಾರಕ ತಾತಯ್ಯನವರ ಆದರ್ಶಗಳಿಗನುಗುಣವಾಗಿ 1937ರಲ್ಲಿ ಬೆಂಗಳೂರಿನಲ್ಲಿ ನಮ್ಮ ತಾಯಿಯನ್ನು ರಿಜಿಸ್ಟರ್ ವಿವಾಹವಾದರು. ಇದಕ್ಕೆ ನಮ್ಮ ತಂದೆ ತಾಯಿ ಎರಡು ಕುಟುಂಬಗಳ ಹಿರಿಯರ ಸಮ್ಮತಿಯೂ ಇದ್ದಿತು, 61 ವರುಷಗಳ ಹಿಂದೆ ನಡೆದ ಈ ವಿಧವಾ ವಿವಾಹ ಮೈಸೂರು ಬೆಂಗಳೂರಿನಲ್ಲಿ ಒಂದು ಸಾಮಾಜಿಕ ಕ್ರಾಂತಿಯನ್ನೇ ಮಾಡಿತು. ಮೈಸೂರಿನಲ್ಲಿ ಅದ್ದೂರಿಯಿಂದ ನಡೆದ ಆರತಕ್ಷತೆಯ ಬಗ್ಗೆ ಅದಕ್ಕೆ ಯಾವ ಯಾವ ಗಣ್ಯರು ಬಂದಿದ್ದರು ಎಂಬುದರ ಬಗ್ಗೆ ಅಂದಿನ ಪತ್ರಿಕೆಗಳು ದೀರ್ಘ ವರದಿ ಬರೆದವು. ಮದುವೆಯಾದ ಮೇಲೆ ನಮ್ಮ ತಂದೆ ನಮ್ಮ ತಾಯಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು ಅವರ ಸಾಹಿತ್ಯ ಸೇವೆಗೆ, ಟೆನಿಸ್ ಆಟಕ್ಕೆ ಮೊದಲಾದ ಚಟುವಟಿಕೆಗಳಿಗೆ ಪ್ರೇರಕಶಕ್ತಿಯಾದರು. ನಮ್ಮ ತಂದೆ-ತಾಯಿಗೆ ನಾವು ನಾಲ್ಕು ಜನ ಮಕ್ಕಳು. ನಾನು, ನನ್ನಿಬ್ಬರು ತಂಗಿಯರು ಲಕ್ಷ್ಮಿ ಮತ್ತು ವಾಣಿ ಹಾಗೂ ತಮ್ಮ ಚಂದ್ರಶೇಖರ. ಸಮಾಜ ಆ ಕಾಲದಲ್ಲೂ ನಮ್ಮ ಕುಟುಂಬವನ್ನು ಅತ್ಯಂತ ಆದರದಿಂದ ಸ್ವೀಕರಿಸಿ ಆದರಿಸಿತು. ನಮ್ಮ ಮನೆಯಲ್ಲಿ ಎಲ್ಲಾ ಧಾರ್ಮಿಕ ಕಾರ್ಯಗಳೂ ನಡೆಯುತ್ತಿದ್ದುದೂ ಒಂದು ಐತಿಹಾಸಿಕ ದಾಖಲೆ. ನಮ್ಮ ತಾತ, ಅಜ್ಜಿ ಶಿವನ ಆರಾಧಕರು, ದೇವೀ ಭಕ್ತರು. ನಮ್ಮ ಮನೆಯಲ್ಲಿ ಶಿವರಾತ್ರಿ ಪೂಜೆ ರಾತ್ರಿಯೆಲ್ಲಾ ನಡೆಯುತ್ತಿತ್ತು. ಶಿವರಾತ್ರಿಯ ದಿನ ಯಾವುದಾದರೂ ಶಿವಕ್ಷೇತ್ರಕ್ಕೆ ನಾನು ಅಜ್ಜಿ, ತಾತನವರ ಜೊತೆ ಹೋಗುತ್ತಿದ್ದುದೂ ಉಂಟು. ನಾಳೆಯಾರೋ ನಾವು ಯಾರೋ. ಆದ್ದರಿಂದ ಈವತ್ತಿನ ಕೆಲಸ ಈವತ್ತೇ ಮಾಡಬೇಕು ಎನ್ನುವುದು ನಮ್ಮ ಅಜ್ಜಿಯ ಧ್ಯೇಯ.

ನಮ್ಮ ತಂದೆ ಎಂ. ಸಿ. ಎಸ್. ಆಗಿದ್ದವರು ಮುಂದೆ ಐ. ಎ. ಎಸ್. ಹಿರಿಯ ಅಧಿಕಾರಿಗಳಾಗಿ ಅನೇಕ ಉನ್ನತ ಹುದ್ದೆಗಳನ್ನು ಅಲಂಕರಿಸಿ 1968 ಮೇ 8ರಂದು ನಿದ್ರೆಯಲ್ಲಿ ಸದ್ದಿಲ್ಲದೆ ನಮ್ಮನ್ನು ಅಗಲಿದರು. ಅವರಿನ್ನೂ ನಿವೃತ್ತರಾಗಿರಲಿಲ್ಲ. ನನ್ನ ತಾಯಿ ಆಗಸ್ಟ್ 15, 1973ರಲ್ಲಿ ಪರಮಾತ್ಮನ ಸಾನ್ನಿಧ್ಯ ಸೇರಿದರು. ನಮ್ಮ ತಂದೆ-ತಾಯಿಯರ ಬದುಕು ಸಮಾಜದ ಮೇಲೆ ತನ್ನ ಸೃಜನಶೀಲ ಪ್ರಭಾವ ಬೀರಿ ಶ್ರೀಮಂತಗೊಳಿಸಿತು. ಅವರನ್ನು ಸದ್ಭಾವನೆಯಿಂದ, ಕೃತಜ್ಞತೆಯಿಂದ ನೆನಸಿಕೊಳ್ಳದ ಹಿರಿಯರಿಲ್ಲ. "A day is not wasted if a memory is made" ಎಂಬ ಒಂದು ಮಾತಿದೆ. ಸಾವಿರಾರು ಜನರ ಮನಸ್ಸನ್ನು ಗೆದ್ದು ಇಂದಿಗೂ ಅವರ ನೆನಪಿನಲ್ಲಿರುವ ನಮ್ಮ ತಂದೆ ತಾಯಿಯವರ ಬದುಕು ಕರ್ನಾಟಕದ ಇತಿಹಾಸದಲ್ಲಿ ಮರೆಯಲಾಗದ ಒಂದು ಮಹತ್ತರ ಮೌಲ್ಯಾಧಾರಿತ ಅಧ್ಯಾಯ.



ಭಗವಾನ್ ಶ್ರೀ ಸತ್ಯಸಾಯಿಬಾಬಾ ಅವರ ಸನ್ನಿಧಿಯಲ್ಲಿ ನಮ್ಮ ತಾಯಿ, ತಂದೆ

1.5.1968



ತಂದೆ ಶ್ರೀ ಎ. ಚಿದಂಬರಯ್ಯನವರು



ಮಾವ ಡಾ॥ ಎಲ್. ರಾಮಕೃಷ್ಣರಾಯರು



ಡಾ॥ ವಿ. ಕೃ. ಗೋಕಾಕ್ ಅವರು



ಶ್ರೀಮತಿ ಶಾರದಾ ಗೋಕಾಕ್ ಅವರು



ನಮ್ಮ ತಾಯಿ - ತನ್ನ ತಂದೆ ತಾಯಿಯರೊಡನೆ - ೧೯೨೦ರ ಸುಮಾರಿಗೆ



ನಮ್ಮ ತಂದೆ, ತಾಯಿ, ಮಗಳು ಮಂಗಳಾ

೧೯೪೦ರ ಸುಮಾರಿಗೆ

# BOUQUETS

## 1935

University of Mysore

MAHARAJA'S COLLEGE
Mysore, July 16, 1935

---

Mr. C. Narasimha Moorthy is one of the ablest and most distinguished men that have ever studied in this College. He is at present holding a post-graduate studentship in Economics and he performed admirable research work, of a practical kind, during his college course. Mr. Narasimha Moorthy was exceedingly prominent in college life, his chief offices, the duties of which he performed most admirably, being those of President of the Students' Representative Council and Secretary of the University Union.

He is so notable a speaker that during his time in college it was always difficult to choose anyone else to represent the college on public occasions. He is a man of fine character and delightful personality.

**J. C. Rollo**
Principal

